# ಹೈಮಾಚಲ ಸಾನ್ನಿಧ್ಯದಲ್ಲಿ

## ಹರಿದ್ವಾರದಿಂದ ಕೇದಾರ – ಬದರಿಗೆ



ಸೋಮನಾಥಾನಂದ

ಪ್ರಕಾಶಕರು :
ಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ
ಕೃಷ್ಣಮೂರ್ತಿಪುರಂ :: ಮೈಸೂರು

## ಅನುಕ್ರಮಣಿಕೆ

# ಮುನ್ನುಡಿ

" ರೂಪಂ ರೂಪವಿವರ್ಜಿತಸ್ಯ ಭವತೋ ಧ್ಯಾನೇನ ಯತ್ಕಲ್ಪಿತಂ
ಸ್ತುತ್ಯಾನಿರ್ವಚನೀಯತಾಖಿಲಗುರೋ ದೂರೀಕೃತಾ ಯನ್ಮಯಾ
ವ್ಯಾಪಿತ್ವಂ ಚ ನಿರಾಕೃತಂ ಭಗವತೋ ಯತ್ತೀರ್ಥಯಾತ್ರಾದಿನಾ
ಕ್ಷನ್ತವ್ಯಂ ಜಗದೀಶ ತದ್ವಿಕಲತಾ ದೋಷತ್ರಯಂ ಮತ್ಕೃತಂ ! "

" ರೂಪವಿವರ್ಜಿತನಾದ ನಿನಗೆ ಧ್ಯಾನ ಸಮಯದಲ್ಲಿ ರೂಪಕಲ್ಪನೆ ಮಾಡಿದ್ದೇನೆ. ನಿನ್ನನ್ನು ಸ್ತೋತ್ರಮಾಡಿ ನಿನ್ನ ಅನಿರ್ವಚನೀಯತೆಯನ್ನು ದೂರೀಕರಿಸಿದ್ದೇನೆ. ತೀರ್ಥಯಾತ್ರಾದಿಗಳನ್ನು ಕೈಕೊಂಡು ನಿನ್ನ ವ್ಯಾಪಿತ್ವವನ್ನು ನಿರಾಕರಿಸಿದ್ದೇನೆ. ಹೇ ಜಗದೀಶ, ಬುದ್ಧಿವಿಕಲತೆಯಿಂದ ನಾನು ಮಾಡಿರುವ ಈ ಮೂರು ಅಪರಾಧಗಳೂ ಕ್ಷಮಾರ್ಹ, ಸ್ವಾಮಿ !"

ಭಗವಂತನಲ್ಲಿ ಕ್ಷಮಾಯಾಚನೆ ಮಾಡುವ ಭಕ್ತಿಸ್ವಾರಸ್ಯವನ್ನು ಅನುಭವಿಸುವುದಕ್ಕಾಗಿಯೆ ಎಂಬಂತೆ ತೋರುತ್ತದೆ, ಮತ್ತಾವ ಅಪರಾಧಗಳನ್ನೂ ಮಾಡಲಾರದೆ ಅಪರಾಧ ದರಿದ್ರರಾಗಿದ್ದ ಅದ್ವೈತಜ್ಞಾನಿಯಾದ ಆಚಾರ್ಯರು ಮೇಲೆ ಹೇಳಿದ ಮೂರು ಮಹಾಪರಾಧಗಳನ್ನು ತಮ್ಮ ಕರ್ಮಭಂಡಾರದಿಂದ ಸಂಶೋಧಿಸಿ ತೆಗೆದು ಪಾಪಾನುಭವದ ಮತ್ತು ಪ್ರಾರ್ಥನಾಪುಣ್ಯಾನುಭವದ ಎರಡು ಮಾಯಾ ಭೋಗಗಳನ್ನೂ ಒಟ್ಟಿಗೆ ಅನುಭವಿಸುವ ಯೋಗಕೌಶಲವನ್ನು ಪ್ರದರ್ಶಿಸಿದ್ದಾರೆ!

ಅನೇಕ ಶತಮಾನಗಳ ಹಿಂದೆಯೆ ಭಗವಂತನ ಪಾದಾರವಿಂದಗಳೆಡೆಗೆ ಯಾತ್ರೆ ಹೊರಟಿರುವ ಈ ರೂಪ-ಸ್ತೋತ್ರ-ಯಾತ್ರಾವಿರೋಧಿಯಾದ ಆಚಾರ್ಯರ ಪ್ರಾರ್ಥನಾಸ್ತುತಿ ಇನ್ನೂ ತನ್ನ ನೆಲೆಗೆ ತಲುಪಿಲ್ಲವೆಂದೆ ತೋರುತ್ತದೆ. ಬಹುಶಃ ಭಗವಂತನ ರೂಪ ಪ್ರೇಮಿಗಳೂ ಭಗವತ್ ಕೀರ್ತನಾಕಾಮಿಗಳೂ ತೀರ್ಥ

ಯಾತ್ರಾಕಾಂಕ್ಷಿಗಳೂ ಆಗಿ ಅನವರತ ಜನಿಸುತ್ತಿರುವ ಅಸಂಖ್ಯೇಯ ಭಾಗವತ ಭಕ್ತರ ಹೃದಯಕಾನನದ ಜಟಿಲಪಥದಲ್ಲಿ ಸಿಕ್ಕಿ ಅದು ದಾರಿಗಾಣದೆಯೊ ದಾರಿತಪ್ಪಿಯೊ ತೊಳಲುತ್ತಿರಬಹುದು! ಆದ್ದರಿಂದ ಆ ಪ್ರಾರ್ಥನೆ ಹೊಮ್ಮಿ ಶತಮಾನಗಳಾದರೂ ಅಂದಿನಂತೆ ಇಂದೂ ಪುಣ್ಯಕ್ಷೇತ್ರಗಳಿಗೆ ಹೋಗುವ ಹೆದ್ದಾರಿಗಳೂ ಕಿರುದಾರಿಗಳೂ ಕಾಲುದಾರಿಗಳೂ ಬೆಟ್ಟ ಕಿಬ್ಬಿಯ ಇಕ್ಕಟ್ಟಿನ ದಾರಿಗಳೂ ದಣಿದ ಯಾತ್ರಿಕರಿಂದ ಕಿಕ್ಕಿರಿದು ಅವರ ದೇಹಭಾರದಿಂದಲೂ ಕರ್ಮಭಾರದಿಂದಲೂ ಕುಸಿದು ಕುಲುಷಿತವಾದರೂ ಪದಧೂಳಿಯಿಂದ ಪವಿತ್ರ ವಾಗುತ್ತಲೆಇವೆ! ಅನೇಕರು ಆಚಾರ್ಯರ ಈ ಕ್ಷಮಾಯಾಚನೆಯ ಸುಂದರ ಸ್ತೋತ್ರವನ್ನೆ ಹಾಡಿಕೊಳ್ಳುತ್ತಲೆ ಯಾತ್ರೆಯಲ್ಲಿ ದಾರಿ ಸಾಗುವುದಕ್ಕೆ ಬೇಕಾದ ಶಕ್ತಿ ಉತ್ಸಾಹ ಆಹ್ಲಾದಗಳನ್ನು ಪಡೆದುಕೊಳ್ಳುತ್ತಿದ್ದರೂ ಆಶ್ಚರ್ಯಪಡ ಬೇಕಾಗಿಲ್ಲ.

ಏಕೆಂದರೆ ನಮ್ಮ ದೇಶ ವಿಲಕ್ಷಣದೇಶ. ಇದು ವಿರೋಧಾಭಾಸಗಳ ಬೀಡು. ನಮ್ಮವರು ಭಗವಂತನ ನಿರಾಕಾರತ್ವವನ್ನು ಸಾರಿದಂತೆ ಬೇರೆ ಯಾರೂ ಸಾರಿಲ್ಲ. ದೇವ ದೇವಿಯರ ವಿಗ್ರಹ ಕೋಟಿಗಳನ್ನೂ ನಮ್ಮವರು ಸೃಜಿಸಿದಂತೆ ಬೇರೆ ಯಾರೂ ಸೃಜಿಸಿಲ್ಲ. ನಮ್ಮ ತತ್ತ್ವವೇತ್ತರು ಸ್ಥಾಪಿಸಿರುವಂತೆ ಅಭೇದ ತ್ವವನ್ನು ಬೇರೆ ಯಾರೂ ಸ್ಥಾಪಿಸಿಲ್ಲ. ವರ್ಣ ಮತ ಜಾತಿ ಪಂಥ ಪಂಗಡ ಆಚಾರಾದಿಗಳಲ್ಲಿ ನಮ್ಮಲ್ಲಿರುವಷ್ಟು ಭೇದಭಾವ ಮತ್ತಾರಲ್ಲಿಯೂ ಇಲ್ಲ. ಗಮ್ಯದ ಏಕತ್ವವನ್ನು ನಮ್ಮವರು ಬೋಧಿಸಿದಂತೆ ಅನ್ಯರಾರೂ ಬೋಧಿಸಿಲ್ಲ; ರುಚಿ ವೈಚಿತ್ರ್ಯ ಮತ್ತು ಋಜು ಕುಟಿಲ ನಾನಾ ಪಥತ್ವಗಳನ್ನೂ ನಮ್ಮವರು ಹಟತೊಟ್ಟು ಸಾಧಿಸುತ್ತಿರುವಂತೆ ಅನ್ಯರಾರೂ ಸಾಧಿಸುತ್ತಿಲ್ಲ! ಅಕ್ಷರಶಃ ನಮ್ಮದು ವಿಲಕ್ಷಣ ದೇಶವೆ ನಿಜ; ಇಲ್ಲಿ ಏನುಬೇಕಾದರೂ ನಡೆಯಬಹುದು; ಯಾವುದಕ್ಕೂ ನಾವು ವಿಸ್ಮಯಪಡಬೇಕಾಗಿಲ್ಲ.

ಹಾಗಾದರೆ ಆಚಾರ್ಯರು, ತೀರ್ಥಯಾತ್ರೆಯನ್ನು ಮತಿವಿಕಲತಾ ದೋಷ ವೆಂದು ತಮ್ಮ ಯಾತ್ರೆಯೆಲ್ಲಾ ಪೂರೈಸಿದಮೇಲೆ ಸಾರಿದ್ದರೂ, ಮುನ್ನಾದರೂ ಅವರು ಆ ತೀರ್ಥಯಾತ್ರೆಯನ್ನೇಕೆ ಕೈಕೊಂಡರು? ಅಥವಾ ಅವರಂತೆಯೆ ಇತರರೂ ಅದನ್ನೇಕೆ ಕೈಕೊಳ್ಳುತ್ತಾ ಬಂದಿದ್ದಾರೆ?

ಯಾವ ಚಾಳಿಯಾಗಲಿ ಪದ್ಧತಿಯಾಗಲಿ ಏನಾದರೊಂದು ಅವಶ್ಯಕತೆ ಯಿಲ್ಲದೆ ಬಹುಕಾಲದಿಂದಲೂ ನಡೆದುಕೊಂಡು ಬರಲಾರದು. ಮನುಷ್ಯನ ಆತ್ಮದಲ್ಲಿಯೆ ಯಾತ್ರೆಯ ಆವಶ್ಯಕತೆಗೆ ಒಂದು ಆಧಾರವಿರಬಹುದೆ?

ಮನುಷ್ಯ ವಾಸ್ತವವಾಗಿಯೂ ಈ ಪ್ರಪಂಚದಲ್ಲಿ ಒಬ್ಬ ಪ್ರವಾಸಿ. ಅವನ ಜೀವನ ಸಮಸ್ತವೂ ಒಂದು ಪ್ರವಾಸ. ಜೀವನಯಾತ್ರೆ ಎಂಬ ರೂಢಿಯ ರೂಪಕದಲ್ಲಿ ಆ ಸತ್ಯ ಧ್ವನಿತವಾಗುತ್ತದೆ. ಅವನ ನಿವಾಸ, ನಿತ್ಯನಿವಾಸ ದೇವರು; ಯಾವನನ್ನು ಜಗನ್ನಿವಾಸ ಎಂದು ಕರೆಯುತ್ತೇವೆಯೊ ಆ ಬ್ರಹ್ಮ ಅಥವಾ ಸಚ್ಚಿದಾನಂದ. ಈ ಪ್ರಪಂಚದ ಪ್ರವಾಸದಲ್ಲಿಯೂ ಜೀವ ನಿತ್ಯಸ್ವರೂಪ ವಾದ ತನ್ನ ನಿಜನಿವಾಸವನ್ನು ಹುಡುಕುತ್ತಾ ಹೋಗುವುದೆ ಅದರ ಸಹಜ ಲಕ್ಷಣ, ಹೊಳೆ ಕಡಲನ್ನರಸುತ್ತಾ ಅದರೆಡೆಗೆ ಹರಿಯುವಂತೆ. ಜೀವದ ಆ ಸಹಜ ಲಕ್ಷಣ ಲಕ್ಷರೂಪಗಳಲ್ಲಿ ಕೋಟಿ ವಿಧಾನಗಳಲ್ಲಿ ಆಯಾ ಲೋಕಸತ್ತೆಗೆ ಅನುಗುಣವಾಗಿ ಪ್ರಕಟವಾಗುತ್ತದೆ, ಆಯಾ ಜೀವ ಸಂಸ್ಕಾರಬದ್ಧವಾಗಿ, ಬಹಿರ್ಮುಖಿಯಾದಾಗ ಒಂದು ರೀತಿಯಲ್ಲಿ, ಅಂತರ್ಮುಖಿಯಾದಾಗ ಮತ್ತೊಂದು ರೀತಿಯಲ್ಲಿ.

ಒಂದು ಕಡೆಯಲ್ಲಿಯೆ ಬಹಳಕಾಲವಿದ್ದು ಬೇಸರವಾದಾಗ ಹೊರಗೆಲ್ಲಿ ಯಾದರೂ ತಿರುಗಾಡಿಕೊಂಡು ಬರಲು ಹೋಗುತ್ತೇವೆ. ಹಾಗೆ ಹೊರಗೆ ಹೋಗ ಲಾಗದವರೂ ಹೋಗಲು ಅಪೇಕ್ಷೆ ಇಲ್ಲದವರೂ ತಮ್ಮೊಳಗೇ ಹೋಗುತ್ತಾರೆ; ಕಾದಂಬರಿ ಓದುತ್ತಾರೆ, ಹಗಲುಗನಸು ಕಾಣುತ್ತಾರೆ ಅಥವಾ ಪುರಾಣ ಕೇಳುತ್ತಾರೆ. ಅಂತೂ ಹೇಗಾದರೂ ದೈಹಿಕವಾಗಿಯೊ ಮಾನಸಿಕವಾಗಿಯೊ ಅಂತರ್ಮುಖ ಬಹಿರ್ಮುಖ ಪ್ರವಾಸೋಪಾಯಗಳಿಂದ ಹೊಸ ಹೊಸ ಉನ್ಮೇಷನ ವನ್ನು ಸಾಧಿಸುತ್ತಾರೆ. ಈ ಹೊಸಹೊಸದಾಗುವಿಕೆ ಬದುಕಿಗೆ ಅತ್ಯಂತ ಆವಶ್ಯಕ. ಅದು ನಿಂತೊಡನೆಯೆ ಬದುಕು ಮುಗಿದಂತೆಯೆ.

ಮನುಷ್ಯ ತನ್ನಿಂದ ತಾನು ತಪ್ಪಿಸಿಕೊಳ್ಳಲು, ತನ್ನನ್ನು ತಾನೆ ಮೀರಿ ತನ್ನತನದಿಂದ ಪಾರಾಗಲು ಎಂತೆಂತಹ ಉಪಾಯಗಳಿಂದ ಎಷ್ಟೆಷ್ಟು ಪ್ರಯತ್ನಿಸು ತ್ತಾನೆ! ತನ್ನಿಂದ ಎಂದರೆ 'ಅಲ್ಪ' ವಾದ ತನ್ನಿಂದ; ಅಥವಾ ತನ್ನ

'ಅಲ್ಪತ್ವ' ದಿಂದ; ಅಥವಾ ತನ್ನ ಅಹಂಕಾರದಿಂದ. ತಾನು ತಪ್ಪಿಸಿಕೊಳ್ಳುವು ದೆಂದರೆ ಭೂಮವಾದುದಕ್ಕೆ ವಿಸ್ತಾರವಾದುದಕ್ಕೆ ಚಿರನೂತನವಾದುದಕ್ಕೆ ನಿರ್ದಿಗಂತವಾದ ಅನುಭವಾಭಿಮುಖವಾಗಿ ಹೋಗುವುದು ಎಂದರ್ಥ. ಈ ಪ್ರವಾಸ ಪ್ರಯತ್ನ ಆಟವಾಡುವುದು ನಾಟಕ ನೋಡುವುದು ಇತ್ಯಾದಿ ಸಾಮಾನ್ಯ ಮನರಂಜನೆಯ ವ್ಯಾಪಾರಗಳಿಂದ ಹಿಡಿದು ತೀರ್ಥಯಾತ್ರೆ, ಪುರಾಣಶ್ರವಣ, ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಸಾಧನೆ ತಪಸ್ಯೆಗಳಲ್ಲಿ ನಿರತರಾಗುವುದು ಇತ್ಯಾದಿ ಮಾನವ ಚೇತನದ ಮಹೋನ್ನತ ಸಾಹಸಗಳವರೆಗೆ ವ್ಯಾಪಿಸುತ್ತದೆ.

ಈ ಪ್ರವಾಸ ಮೂರು ಮುಖಗಳಲ್ಲಿ ಸಾಗಲು ಸಾಧ್ಯ. ಒಂದು ಅಧೋಮುಖಿ, ಮತ್ತೊಂದು ಸಮತಲಮುಖಿ, ಇನ್ನೊಂದು ಊರ್ಧ್ವಮುಖಿ. ಮಾದಕ ಮತ್ತು ಲೈಂಗಿಕಾದಿ ಪ್ರಪಂಚಗಳಲ್ಲಿ ತನ್ನನ್ನು ತಾನು ಮರೆಯಲೂ ಮೀರಲೂ ಮಾನವ ಕೈಕೊಳ್ಳುವ ಸಾಹಸಗಳೆಲ್ಲ ಅಧೋಮುಖ ಪ್ರವಾಸಕ್ಕೆ ಸೇರುತ್ತವೆ. ಅದರ ಪರಿಣಾಮ ಮೊದಮೊದಲು ಸ್ವಾದುವಾದರೂ ತುದಿಯಲ್ಲಿ ಕೇಡು: ತನಗೆ, ತನ್ನ ಸಮಾಜಕ್ಕೆ, ತನ್ನ ನಾಡಿಗೆ, ಸಾಹಿತ್ಯ, ಸಂಗೀತ, ಕಲೆ, ಲೋಕ ಪೂಪ್ಪುವ ಅಥವಾ ಮೆಚ್ಚುವ ಯಾವುದಾದರೊಂದು ಸುಧಾರಣೆಯ ಚಳುವಳಿ, ರಾಜಕಾರಣ, ರಾಜ್ಯಸಭೆ ಮತ್ತು ಪರಿಷತ್ತುಗಳಲ್ಲಿ ಭಾಗವಹಿಸುವುದು, ದೇಶಭಕ್ತಿಯ ಅಥವಾ ದೇಶರಕ್ಷಣೆಯ ಅಥವಾ ಸಮಾಜಸೇವೆಯ ಚಟುವಟಿಕೆಗಳಲ್ಲಿ ಆಸಕ್ತನಾಗುವುದು, ಇತ್ಯಾದಿ ಇತ್ಯಾದಿ ನಮ್ಮ ಸುತ್ತ ಮುತ್ತ ದಿನವೂ ನಡೆಯುತ್ತಿರುವ ನೂರಾರು ವ್ಯಾಪಾರಗಳಲ್ಲಿ ಮನಃಪೂರ್ವಕವಾಗಿ ಮುಳುಗುವುದೆ, ನಮ್ಮನ್ನು ನಾವು ಮರೆಯುವುದೆ, ಮೀರುವುದೆ, ಸಮತಲಮುಖ ಪ್ರವಾಸ. ಆಧ್ಯಾತ್ಮಿಕ ಶ್ರೇಯಸ್ಸೆ ಧ್ಯೇಯವಾಗಿ, ನಮ್ಮ ಸಮಸ್ತ ಪ್ರಜ್ಞೆಯ ಪೂರ್ಣ ಸಮರ್ಪಣವೆ ದಾರಿಯಾಗಿ, ನಮ್ಮ ಪೂರ್ಣತೆಯ ಅನುಸಂಧಾನಕ್ಕಾಗಿ ನಾವು ಕೈಗೊಳ್ಳುವ ಅತ್ಯಪೂರ್ವ ಸಾಹಸವೆ ಅತ್ಯಂತ ವಿರಳವಾದ ಊರ್ಧ್ವಮುಖ ಪ್ರವಾಸ.

ತೀರ್ಥಯಾತ್ರೆಯೂ ಅಂತಹ ಪ್ರವಾಸಗಳಲ್ಲಿ ಒಂದು. ಅದು ಅದನ್ನು ಕೈಗೊಳ್ಳುವ ವ್ಯಕ್ತಿಯನ್ನೂ ಅದರ ಕಾರಣೋದ್ದೇಶ ಪ್ರಯೋಜನಗಳನ್ನೂ

ಅವಲಂಬಿಸಿ ಸಮತಲಮುಖ ಪ್ರವಾಸವಾದರೂ ಆಗಬಹುದು ; ಊರ್ಧ್ವಮುಖ ಪ್ರವಾಸವಾದರೂ ಆಗಬಹುದು. ವಿಹಾರಕ್ಕಾಗಿ, ವಿಲಾಸಕ್ಕಾಗಿ, ಬೇಸರ ಪರಿಹಾರಕ್ಕಾಗಿ, ಹೊಸ ಊರುಗಳನ್ನೂ ನಾಡುಗಳನ್ನೂ ಜನರನ್ನೂ ಸಂಧಿಸುವ ಅನುಭವದ ಸಂತೋಷಕ್ಕಾಗಿ, ಪ್ರಕೃತಿಯ ಸೌಂದರ್ಯ ವೈಚಿತ್ರ್ಯಗಳನ್ನು ಸಂದರ್ಶಿಸುವ ರಸಿಕಾನುಭವಕ್ಕಾಗಿ, ಮನೆಯ ತಾಪತ್ರಯಗಳಿಂದ ಕೆಲಕಾಲವಾದರೂ ದೂರವಾಗುವ ನೆವಕ್ಕಾಗಿ, ಒದಗಿದ ಯಾವುದಾದರೂ ಸಂಕಟದಿಂದ ದೂರವಾಗಿ ಅದನ್ನು ಆವಷ್ಟು ಮರೆಯುವುದಕ್ಕಾಗಿ, ಹೊತ್ತ ಹರಕೆಯನ್ನು ತೀರಿಸಬೇಕೆಂಬ ದೇವಋಣ ವಿಮೋಚನೆಯ ಕರ್ತವ್ಯಕ್ಕಾಗಿ, ದಿವ್ಯಸ್ಥಾನಗಳಿಗೆ ಯಾತ್ರೆ ಹೋಗಿ ಬಂದು ಜನರ ಗೌರವಾರಾಧನಗಳಿಗೆ ಭಾಜನನಾಗಿ ಪೂಜ್ಯನಾಗುವುದಕ್ಕಾಗಿ ಪುಣ್ಯಕ್ಷೇತ್ರಗಳಿಗೆ ನಾವು ಕೈಕೊಳ್ಳುವ ಪ್ರವಾಸ ಬಹುಟ್ಟಿಗೆ ಸಮತಲಮುಖಿ. ಆಧ್ಯಾತ್ಮಿಕ ಭೂಮಿಕೆಯಲ್ಲಿ ಮುಂದುವರಿಯುವುದಕ್ಕಾಗಿ, ಆತ್ಮವಿಕಾಸಕ್ಕಾಗಿ, ಭಗವಂತನಲ್ಲಿ ಶರಣಾಗತಿ ಮತ್ತು ಸರ್ವ ಸಮರ್ಪಣಬುದ್ಧಿ ಸಾಧನೆಗಾಗಿ, ನಮ್ಮ ಯೋಗಕ್ಷೇಮವನ್ನು ಸಂಪೂರ್ಣವಾಗಿ ಭಗವಂತನ ಅಡಿದಾವರೆಗಳಿಗೆ ಅರ್ಪಿಸಿ ಹೃದಯದಲ್ಲಿ ನಿರ್ಭರತೆಯ ಭಾವವನ್ನು ಬಲಿಯುವುದಕ್ಕಾಗಿ, ಅಹಂಕಾರವಿಸರ್ಜನೆಗಾಗಿ, ತಿತಿಕ್ಷೆಗಾಗಿ, ಅಧ್ಯಾತ್ಮದಲ್ಲಿ ಮುಂದುವರಿದ ಸಿದ್ಧಪುರುಷರ ಸಂಗ ಸಂಸರ್ಗ ಸಾನ್ನಿಧ್ಯ ಸಂಪಾದನೆಗಾಗಿ, ಶತಮಾನಗಳಿಂದಲೂ ಕೋಟ್ಯಂತರ ಭಕ್ತರ ಆರ್ತರ ಸಾಧಕರ ಸಿದ್ಧರ ಕರೆಗೇಳಿ ಮೊರೆಗೇಳಿ ಕೃಪೆಯಿಂದಿಳಿದ ಭಗವದನುಗ್ರಹ ಆವಿರ್ಭೂತವಾಗಿರುವ ಜಾಗ್ರತಮೂರ್ತಿಸ್ಥಾನಗಳ ಮಹಿಮಾದೀಪ್ತಿಯಿಂದ ಚೇತನದ ತಮಃಪರಿಹಾರ ಮಾಡಿಕೊಳ್ಳುವ ಅವಿದ್ಯಾವರಣಭಂಗ ಸಾಧನೆಗಾಗಿ ಮುಮುಕ್ಷು ಕೈಕೊಳ್ಳುವ ತೀರ್ಥಯಾತ್ರಾರೂಪವಾದ ಪ್ರವಾಸವೆ ಊರ್ಧ್ವಮುಖಿ ಎಂಬ ಹೆಸರಿಗೆ ಅರ್ಹವಾಗುತ್ತದೆ.

ಅಂದರೆ ಅಂತಹ ಊರ್ಧ್ವಮುಖಪ್ರವಾಸದ ವಿಚಾರವಾಗಿಯೆ ಅಲ್ಲವೆ ಭಗವದ್ಗೀತೆ ಹೀಗೆ ಹೇಳುವುದು ;

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥

ಪುಣ್ಯಕ್ಷೇತ್ರಗಳಿಗೆ ಯಾತ್ರೆಹೋಗಿಬಂದ ಮಾತ್ರದಿಂದಲೆ ಪವಿತ್ರನಾಗಿಬಿಡುತ್ತೇನೆ ಎಂಬ ನಂಬಿಕೆಯಲ್ಲಿ ಆತ್ಮವಂಚನೆಗೆ ವಿಶೇಷವಾದ ಅವಕಾಶವಿರುವುದನ್ನರಿತೆ ಅನೇಕ ಕವಿಗಳೂ ಸಾಧುಸಂತರೂ ಅದರಿಂದೊದಗುವ ಧಾರ್ಮಿಕ ಸಹಾಯ ವನ್ನು ಪ್ರಶಂಸಿಸಿರುವುದಕ್ಕಿಂತಲೂ ಹೆಚ್ಚಾಗಿ ಅದರಿಂದೊದಗಬಹುದಾದ ಧಾರ್ಮಿಕ ಅಪಾಯದ ಕಡೆಗೆ ನಮ್ಮ ಗಮನ ಸೆಳೆದಿದ್ದಾರೆ.

ಕಾಶಿಯಲ್ಲಿ ಪ್ರಾಣಬಿಟ್ಟರಾಯಿತು ತನಗೆ ಮೋಕ್ಷವೊದಗುತ್ತದೆ ಎಂಬ ಭಾವನೆ ಒಳ್ಳಿಗೆ ಪ್ರೇರಕವಾಗುವುದಕ್ಕಿಂತ ಹೆಚ್ಚಾಗಿ ಕೇಡಿಗೆ ಕಾರಕವಾಗ ಬಹುದಲ್ಲವೆ?

ಹುಲಿ ತಿಂದು ಬಿಟ್ಟ ದುರಾಚಾರಿಯೊಬ್ಬನ ಎಲುಬಿನ ಚೂರನ್ನು ಕಾಗೆ ಕಚ್ಚಿಕೊಂಡುಹೋಗಿ ನೀರಿಗೆ ಬೀಳಿಸಿದ ಮಾತ್ರದಿಂದ ಅವನ ಜೀವವನ್ನು ಕೊಂಡೊಯ್ಯುವುದಕ್ಕಾಗಿ ಯಮದೂತ ದೇವದೂತರಿಗೆ ದೊಡ್ಡದೊಂದು ಕಾಳಗವೆ ನಡೆದು ಕಡೆಗೆ ದೇವದೂತರೆ ಗೆದ್ದು ಅವನ ಆತ್ಮವನ್ನು ವೈಕುಂಠಕ್ಕೆ ಒಯ್ದರು–ಎಂಬ ಕ್ಷೇತ್ರ ಮಹಿಮಾ ಸ್ಥಾಪನೋದ್ದೇಶದ ಕಟ್ಟುಕತೆಯಿಂದ ಪಾಪರುಚಿಯ ಜನಹೃದಯದ ಮೇಲೆ ಏನುತಾನೆ ಅನಾಹುತ ಪರಿಣಾಮ ಆಗಲಾರದು?

ಆದ್ದರಿಂದಲೆ ಎಂದು ತೋರುತ್ತದೆ ನಮ್ಮ ಪುಣ್ಯಕ್ಷೇತ್ರಗಳಲ್ಲಿ ಪಾಪ ಪುರುಷ ಯಾವ ದಂಡನೆಯ ಮತ್ತು ದಂಡಧಾರಿಗಳ ಭಯವೂ ಇಲ್ಲದೆ ತನ್ನ ಭೋಗವಿಲಾಸ ವ್ಯಾಪಾರಗಳಿಗಾಗಿ ಸಂತೆಸಂತೆಗಳನ್ನೆ ತೆರೆದಿಟ್ಟದ್ದಾನೆ! ಆದರೆ ಅಂತಹ ಪರಿಸ್ಥಿತಿ ಪುಣ್ಯಕ್ಷೇತ್ರಗಳಿಗೆ ಮಾತ್ರ ವಿಶೇಷವಾದುದೇನೂ ಅಲ್ಲಪಷ್ಟೆ! ಎಲ್ಲ ಕ್ಷೇತ್ರಗಳಲ್ಲಿಯೂ ಪಾಪಪುರುಷನಿಗೆ ಸಂತೆಪೇಟೆಗಳಿದ್ದೆ ಇರುತ್ತವೆ.

ಅತಿ ಎಲ್ಲಿಯೂ ಒಳಿತಲ್ಲ. ಅತಿಖಂಡನೆ ಅತಿಶ್ಲಾಘನೆಗಿಂತ ಅನರ್ಥಕಾರಿ ಯಾಗಬಹುದು. ತೀರ್ಥಯಾತ್ರೆಗಳಿಂದಲೂ ಪುಣ್ಯಕ್ಷೇತ್ರಗಳಿಂದಲೂ ನೊಂದ ಜೀವಕ್ಕೂ ಬೆಂದಲೋಕಕ್ಕೂ ಶಾಂತಿ ಸಮಾಧಾನಗಳು ಮತ್ತೆ ಮತ್ತೆ ದೊರೆಯು ತ್ತಿರುವುದರಿಂದಲೆ ಜನರು ಪ್ರಯಾಣದ ಕ್ಲೇಶ, ಕಷ್ಟ, ದುರ್ಗಮತೆ, ಅಪಾಯ,

ಕಡೆಗೆ ಸಾವು, ಯಾವುದನ್ನೂ ಲೆಕ್ಕಿಸದೆ ಮತ್ತೆ ಮತ್ತೆ ಅಂತಹ ಪ್ರವಾಸಗಳನ್ನು ಕೈಕೊಳ್ಳುತ್ತಿರುವುದಲ್ಲವೆ? ಅಂತಹ ಪ್ರವಾಸ ಯಾರಿಗೆ ಆವಶ್ಯಕವೊ ಅವರನ್ನು ಮೂಢರೆಂದಾಗಲಿ ಭ್ರಾಂತರೆಂದಾಗಲಿ ಕರೆದರೆ ತಪ್ಪಾಗುತ್ತದೆ, ಆಸ್ಪತ್ರೆಗೆ ಹೋಗುವ ರೋಗಿಯನ್ನು ಮೂಢನೆಂದಾಗಲಿ ಭ್ರಾಂತನೆಂದಾಗಲಿ ಕರೆದರೆ ತಪ್ಪಾಗುವಂತೆ.

ಸ್ವಾಮಿ ಸೋಮನಾಥಾನಂದರು ತಮ್ಮ ಈ ಪ್ರವಾಸ ಪುಸ್ತಕಕ್ಕೆ ಮುನ್ನುಡಿ ಬರೆದುಕೊಡಬೇಕೆಂದು ಕೇಳಿದಾಗ ನಾನು ಮೊದಲು ಹಿಂಜರಿದೆ. ಏಕೆಂದರೆ ನನಗೆ ಪುಣ್ಯಕ್ಷೇತ್ರ ಮತ್ತು ತೀರ್ಥಯಾತ್ರೆಗಳ ವಿಚಾರದಲ್ಲಿ ಅಷ್ಟೇನೂ ಶ್ರದ್ಧೆಯಿದೆ ಎಂದು ಹೇಳಿಕೊಳ್ಳಲಾರೆ. ನಾನು ಪೂಜೆಯ ಸಲುವಾಗಿ ದೇವಸ್ಥಾನಗಳಿಗೆ ಕೂಡ ಹೋಗದೆ ಕಾಲು ಶತಮಾನಕ್ಕಿಂತಲೂ ಹೆಚ್ಚಾಯಿತೆಂದು ತೋರುತ್ತದೆ. ನಾನು ಜಾತಕ ಪಂಚಾಂಗ ಇತ್ಯಾದಿಗಳ ಕಡೆ ಎಂದೂ ಮುಖ ಹಾಕಿದವನಲ್ಲ. ನನಗೆ ರಾಹುಕಾಲ ಗುಳಿಕಕಾಲಗಳ ಅರ್ಥವೂ ಗೊತ್ತಿಲ್ಲ. ಪಿತೃಗಳಿಗೆ ಶ್ರಾದ್ಧಮಾಡುವುದು ಪಿಂಡ ಅರ್ಪಿಸುವುದು ಇತ್ಯಾದಿಗಳನ್ನು ಕೇಳಿಬಲ್ಲೆನೆ ಹೊರತು ಮಾಡುವ ಗೋಜಿಗೆ ಹೋದವನಲ್ಲ. ಹಿಂದೂಧರ್ಮಕ್ಕೆ ಸೇರಿದುವು ಎಂದು ಹೇಳಿಕೊಂಡು ಅನೇಕರು ಆಚರಿಸುವ ಕ್ರಿಯೆಗಳಲ್ಲಿ ಮುಕ್ಕಾಲು ಮೂರು ವೀಸಕ್ಕಿಂತಲೂ ಹೆಚ್ಚು ಪಾಲಿಗೆ ನಾನು ಸ್ವಭಾವತಃ ವಿಮುಖವಾಗಿದ್ದೇನೆಂದು ತೋರುತ್ತದೆ. ಹೀಗಿರುವವನು ಕೇದಾರ ಬದರೀನಾಥಾದಿ ಪುಣ್ಯಕ್ಷೇತ್ರಗಳಿಗೆ ಯಾತ್ರೆ ಹೋಗಿರುವವರು ಯಾವ ಯಾವ ನಂಬುಗೆಗಳಿಂದ ಏನೇನನ್ನು ಮಾಡುತ್ತಾರೊ ಅದನ್ನೆಲ್ಲ ಸಹಾನುಭೂತಿಯಿಂದ ನೋಡಿ ಶ್ಲಾಘಿಸುವುದು ಸಾಧ್ಯವಾಗುತ್ತದೆಯೆ? ಅದು ಸಾಧ್ಯವಾಗದಿದ್ದರೆ ಟೀಕಿಸುವುದು ಮುನ್ನುಡಿ ಬರೆಯುವವನಿಗೆ ಯೋಗ್ಯವೆ, ಸಭ್ಯವೆ? ಮನಸ್ಸಿನಲ್ಲಿ ಖಂಡನೆಯಿದ್ದೂ ಬಾಯಲ್ಲಿ ಮಾತ್ರ ಉಪಚಾರಶ್ಲಾಘನೆ ಮಾಡುವುದು ನನಗೆ ಎಂದಾದರೂ ಸಾಧ್ಯವೆ? ನನ್ನ ಸ್ವಂತ ಅಭಿಪ್ರಾಯವೇನಾದರೂ ಆಗಿರಲಿ; ಇತರರ ಹೃದಯಾನುಭವದ ದೃಷ್ಟಿಯಿಂದಲಾದರೂ ಅದನ್ನು ಮೆಚ್ಚಬಹುದಲ್ಲ ಎಂದರೆ, ಮನಸ್ಸಿನಲ್ಲಿ ಇನ್ನೂ ಹಸಿ ಹಸಿಯಾಗಿರುವ ಮೊನ್ನೆ ಮೊನ್ನೆ ನಡೆದ ಕುಂಭಮೇಳದ ಕಾಲ್ತುಳಿತದ ಮರಣಕಾಂಡದ ಪ್ರಕರಣವೂ ಅದಕ್ಕಿಂತಲೂ

ಹೆಚ್ಚು ಸಮೀಪವಾಗಿರುವ ಮಾದೇಶ್ವರ ಬೆಟ್ಟದ ಜಾತ್ರೆಯ ಕಾಲರಾ ಬಲಿಯ ವಾರ್ತೆಯ ಅಸಹ್ಯಾನುಭವವೂ ತಮ್ಮ ಅಶ್ಲೀಲ ವಿಕಾರ ಭೀಕರ ರೂಪಗಳಿಂದ ನನ್ನ ಮುಂದೆದ್ದು ನಿಂತು ಹಲ್ಲುಕಿರಿದು ಹಾಸ್ಯಮಾಡುವಂತೆ ಭಾಸವಾಯಿತು! ಇಂತಹ ಗುರುಪ್ರಮಾಣದ ಕೇಡಿಗೆ ಕಾರಣವಾಗುವ ಮೌಢ್ಯಗಳನ್ನು ಖಂಡಿಸದೆ ಶ್ಲಾಘಿಸಿದರೆ ಜನಕ್ಕೆ ದ್ರೋಹವೆಸಗಿದಂತಾಗುತ್ತದೆ ಎಂದು ತೋರಿತು. ಈ ಎಲ್ಲ ಇಕ್ಕಟ್ಟಿನಲ್ಲಿ ಸಿಲುಕಿದ ನಾನು ಮುನ್ನುಡಿ ಬರೆದುಕೊಡುತ್ತೇನೆಂದು ಮಾತು ಕೊಡಲಿಲ್ಲ. " ನಿಮ್ಮ ಪುಸ್ತಕ ಓದುತ್ತೇನೆ. ಸಾಧ್ಯವಾದರೆ, ಪ್ರೇರಣೆಯಾದರೆ, ಬರೆಯುತ್ತೇನೆ. ಇಲ್ಲದಿದ್ದರೆ ಇಲ್ಲ. ನಾನು ಬರೆದುಕೊಡುತ್ತೇನೆಂದು ನೀವು ನಂಬಲೂಬಾರದು, ನಿರೀಕ್ಷಿಸಲೂ ಬಾರದು " ಎಂದೆ. ನನ್ನ ಸ್ವಭಾವಸರಳತೆಯನ್ನೂ ಅದರ ನಿಷ್ಠುರತೆಯನ್ನೂ ಚೆನ್ನಾಗಿ ಅರಿತಿರುವ ಅವರು 'ಆಗಲಿ' ಎಂದು ಒಪ್ಪಿಕೊಂಡು, ನನ್ನ ಮನಸ್ಸನ್ನು ಹೊರೆ ಹೊಣೆ ಎರಡರಿಂದಲೂ ಪಾರು ಮಾಡಿ ಅದನ್ನು ಹಗುರವನ್ನಾಗಿ ಮಾಡುವುದರಿಂದಲೆ ಮುನ್ನುಡಿಯ ಮೂಡಿಕೆಗೆ ಅಗೆ ಹಾಕಿ ಹೋದರು.

ಪುಸ್ತಕ ಓದಿದೆ. ಧೈರ್ಯವಾಯಿತು. ಸ್ವಾಮಿ ಸೋಮನಾಥಾನಂದರಂತಹ ಭಕ್ತರ ಭಾವಸಂಗವೂ ಜ್ಞಾನಿಗಳ ವಿಚಾರಪೂರ್ಣ ದೃಷ್ಟಿಯೂ ಸಹ ಯಾತ್ರಿಗಳಾದ ಪಕ್ಷದಲ್ಲಿ ನಾನೂ ಮೂಢಾಚಾರಿಯಾಗುವ ಭೀತಿಯಿಲ್ಲದೆ ಹೈಮಾಚಲ ಸಾನ್ನಿಧ್ಯಕ್ಕೆ ಯಾತ್ರೆ ಹೋಗಿಬರಬಹುದೆಂದು ತೋರಿತು. ಅಷ್ಟೇ ಅಲ್ಲ: ಆಗಲೆ ಅವರೊಡನೆ ಯಾತ್ರೆ ಹೋಗಿ ಬಂದಂತೆಯೂ ಅನುಭವ ವಾಯಿತು.

ಕನ್ನಡದಲ್ಲಿ ಪ್ರವಾಸಸಾಹಿತ್ಯ ಹೆಚ್ಚಾಗಿಲ್ಲ; ಅದರಲ್ಲಿಯೂ ಇಂತಹ ಪವಿತ್ರಯಾತ್ರೆಯ ತೀರ್ಥಸಾಹಿತ್ಯ. ಸ್ವಾಮಿಗಳು ಹಿಂದೆ ಕಾಶ್ಮೀರದಲ್ಲಿರುವ ಅಮರನಾಥಕ್ಕೆ ಯಾತ್ರೆ ಹೋಗಿ ಬಂದ ಮೇಲೆ 'ಅಮರನಾಥಯಾತ್ರೆ' ಎಂಬ ಹೆಸರಿನ ಹೊತ್ತಿಗೆಯನ್ನು ಬರೆದು ಕನ್ನಡಿಗರಿಗೆ ಆ ಅನುಭವದ ಔತಣವನ್ನು ಉಣಬಡಿಸಿದ್ದರು. ಈಗ ಈ 'ಹೈಮಾಚಲ ಸಾನ್ನಿಧ್ಯದಲ್ಲಿ' ಎಂಬ ಪುಸ್ತಿಕೆಯಲ್ಲಿ ಹಿಂದಿನದಕ್ಕಿಂತಲೂ ಸಮಧಿಕತರವಾದ ಔತಣವನ್ನು ಉಣಬಡಿಸಿದ್ದಾರೆ.

ಇಲ್ಲಿ ಭಕ್ತಿ ಮೌಢ್ಯಕ್ಕೂ ಮಿಥ್ಯಾಚಾರಕ್ಕೂ ಶರಣಾಗಿಲ್ಲ. ವಿವೇಕ ವಿಚಾರಗಳ ಗೌರವರಕ್ಷೆಯಲ್ಲಿಯೆ ಅದಕ್ಕೆ ದೇವಸ್ಥಾನ ಪ್ರವೇಶವಾಗುತ್ತದೆ. ಮತಿಯ ತೀಕ್ಷ್ಣಖಡ್ಗ ಸದಾ ಒರೆಗಳಚಿದ್ದರೂ ಔದಾರ್ಯದ ಮುಷ್ಟಿಯಲ್ಲಿ ಸಂಯಮಶೀಲವಾಗಿ ವರ್ತಿಸುತ್ತಿರುವುದನ್ನು ಕಾಣುತ್ತೇವೆ. ಒಮ್ಮೊಮ್ಮೆ ಲೇಖಕರು ತೋರಿಸುವ ಸಹಾನುಭೂತಿ ಮಗುವನ್ನು ಕೆಡಿಸುವ ಅಜ್ಜಿಯ ಅತಿಮುದ್ದಾಗುತ್ತದೆಯೊ ಎಂದು ಹೆದರಿಕೆಯಾಗುತ್ತದೆ. ತುಂಗನಾಥದ ಮಹಿಮೆಯನ್ನು ವಿವರಿಸುವ ಪುಸ್ತಕವೊಂದನ್ನು ಅವರು ಓದಿದಾಗ ಆ ಕಟ್ಟುಕತೆಯ ಉತ್ಪ್ರೇಕ್ಷೆಗೆ ಬೆರಗಾಗಿ 'ನನ್ನ ಯುಕ್ತಿ ತತ್ತರಿಸಿತು' ಎಂದು ಹೇಳಿದರೂ ಮುಂದೆ 'ಯಾರೂ ಭಗವಂತನ ಆಶೀರ್ವಾದಕ್ಕೆ ಬಾಹಿರರಲ್ಲ' ಎಂಬ ವ್ಯಾಖ್ಯಾನದಿಂದ ಅದನ್ನು ವಿವರಿಸ ಹೊರಟು ತಮ್ಮ ಖಂಡನೆಯ ಖಡ್ಗವನ್ನು ಔದಾರ್ಯದ ಒರೆಗೆ ದಬ್ಬಿಬಿಡುತ್ತಾರೆ!

ಆದರೆ ದೇವರ ಹೆಸರಿನಲ್ಲಿ ಮಿಥ್ಯಾಚಾರ ವಂಚನೆ ಇತ್ಯಾದಿಗಳನ್ನು ಕಂಡಾಗ ಲೇಖಕರ ಟೀಕೆ ನಖವೆತ್ತಿ ಅಪ್ಪಳಿಸುವುದನ್ನು ಕಾಣುತ್ತೇವೆ.

"ಬಸ್ಸಿನಿಂದ ಇಳಿದುದೆ ತಡ ಪಂಡರ ತಂಡಮುತ್ತಿತು. ಪಂಡರೆಂದರೆ ಉತ್ತರಕಾಂಡದ ತೀರ್ಥಯಾತ್ರೆಯಲ್ಲಿ ಯಾತ್ರಿಕರ ಸಹಾಯಾರ್ಥವಾಗಿರುವ ಒಂದುಜನ. ಅವರ ಕಸುಬೇ ಯಾತ್ರಿಕರನ್ನು ಸುಲಿದು ತಿನ್ನುವುದು. ಆ ಪೂಜೆ ಮಾಡಿಸಿ, ಈ ಪೂಜೆ ಮಾಡಿಸಿ ಎನ್ನುವರು. ಪಿತೃಗಳನ್ನು ಪರಲೋಕಕ್ಕೆ ಕಳುಹಿಸಲು ಇದು ಶ್ರೇಷ್ಠಸ್ಥಾನ ಎನ್ನುವರು. ಇಲ್ಲಿ ದಾನ ಮಾಡಿದರೆ ಒಂದಕ್ಕೆ ಸಾವಿರದಷ್ಟು ಫಲಿಸುವುದು ಎನ್ನುವರು. ಇವರನ್ನು ನೋಡಿದರೆ ಜಿಗುಪ್ಸೆ ಬರುವುದು. ಪೂಜೆ ಮಾಡಿಸುವರು. ಆದರೆ ಮಂತ್ರವೇ ಚೆನ್ನಾಗಿ ಬರುವುದಿಲ್ಲ. ಬ್ರಾಹ್ಮಣರೆಂದು ಕರೆಸಿಕೊಳ್ಳುವವರು, ಸ್ನಾನ ಸಂಧ್ಯಾವಂದನೆ ಯಾವುದರ ಆವಶ್ಯಕತೆಯೂ ಇವರಿಗಿಲ್ಲ. ವಿದ್ಯೆಯಿಲ್ಲ, ಸಂಸ್ಕೃತಿಯಿಲ್ಲ. ಜನರನ್ನು ಪೀಡಿಸಿ ದುಡ್ಡು ವಸೂಲುಮಾಡುವ ರಣಹದ್ದುಗಳಂತಿರುವರು. ಸರಿಯಾಗಿ ದುಡ್ಡು ಕೊಡದೆ ಹೋದರೆ ಮನಸ್ಸಿ ನಿಂದೆಯ ಮಳೆ ಕರೆಯುವರು. ದಾರಿಯಲ್ಲಿ ಸಿಕ್ಕುವ ಭಿಕ್ಷುಕರನ್ನಾದರೂ ಮೆಚ್ಚಬಹುದು; ಆದರೆ ಈ ಪಂಡರನ್ನು ಸಹಿಸುವುದು ದುಸ್ಸಾಧ್ಯವಾಗುವುದು.

"ಇದೇ ಊರಿನಲ್ಲಿ ಹಿಂದೆ ಶ್ರೀರಾಮ ತಪಸ್ಸನ್ನು ಮಾಡಿದನಂತೆ. ರಾವಣವಧಾನಂತರ ಬ್ರಹ್ಮಹತ್ಯಾ ದೋಷ ಬರಲು ಅದರಿಂದ ಪಾರಾಗಲು ಈ ತಪಸ್ಸು. ಈ ಬ್ರಹ್ಮಹತ್ಯಾದೋಷ ಯಾರನ್ನೂ ಬಿಡುವುದಿಲ್ಲ, ರಾಮನನ್ನೂ ಬಿಡಲಿಲ್ಲ. ಶಿವನನ್ನೂ ಬಿಡಲಿಲ್ಲ. ಶಿವ ಬ್ರಹ್ಮನ ಐದು ತಲೆಗಳಲ್ಲಿ ಒಂದನ್ನು ಉಗುರಿನಿಂದ ಜಿಗುಟಿದಾಗ ಆ ತಲೆ ಅವನ ಕೈ ಬೆರಳಿಗೆ ಅಂಟಿಕೊಂಡಿತಂ. ಆ ಪಾಪದಿಂದ ಪಾರಾಗಲು ಶಿವ ಹಿಮಾಲಯದಲ್ಲಿ ಬದರೀನಾಥಕ್ಕೆ ಯಾತ್ರೆ ಮಾಡಬೇಕಾಯಿತು. ಅಲ್ಲಿಗೆ ಹೋದಾಗ ಅದು ಬಿದ್ದುಹೋಯಿತೆಂದು ಹೇಳುವರು. ತನಗೆ ಏನೂ ಕೆಡಕು ಮಾಡದೆ ಲೋಕಕಂಟಕನಾಗದೆ ಇದ್ದ ವಾಲಿಯನ್ನು ಕೊಂದುದಕ್ಕೆ ರಾಮ ಪಶ್ಚಾತ್ತಾಪ ಪಡಲಿಲ್ಲ, ತಪಸ್ಸು ಮಾಡಲಿಲ್ಲ. ಲೋಕಕಂಟಕನಾದ ರಾವಣನನ್ನು ಸಂಹರಿಸಿದುದಕ್ಕೆ ರಾಮನನ್ನೇ ತಪಸ್ಸು ಮಾಡುವಂತೆ ಜನ ಬಲಾತ್ಕರಿಸಿದರು. ಏಕೆಂದರೆ ರಾವಣ ಜಾತಿಯಲ್ಲಿ ಬ್ರಾಹ್ಮಣ ನಾಗಿದ್ದನಂತೆ, ವೇದಪಾರಾಯಣ ಮಾಡಬಲ್ಲವನಾಗಿದ್ದನಂತೆ. ಜಾತಿಗೆ ಎಷ್ಟು ಪ್ರಾಶಸ್ತ್ಯ ಕೊಟ್ಟಿರುವರು ನಮ್ಮವರು ಎಂದುಕೊಂಡೆ. ಅದೇ ಧರ್ಮಶಾಸ್ತ್ರ ಗಳನ್ನೂ ಪುರಾಣಗಳನ್ನೂ ಬೇರೆ ಕೋಮಿನವರು ಬರೆದಿದ್ದರೆ ಅದು ಬೇರೆ ವಿಧವಾಗಿರುತ್ತಿತ್ತು.

"ಬಾಯಾರಿದಾಗ ನಾವು ನೀರು ಕೊಟ್ಟರೆ ಆಕೆ ನೀರನ್ನು ಕುಡಿಯ ಲೊಲ್ಲಳು. ಆ ನೀರಿಗೆ ಸ್ವಲ್ಪ ಹಾಲು ಬೆರೆಸಿ ಅದನ್ನು ಕುಡಿದರೆ ಮಾತ್ರ ಆಕೆಯ ಜಾತಿ ಉಳಿಯುವುದು. ಹಾಲಿಗೆ ದೋಷವಿಲ್ಲವಂತೆ. ನೀರಿಗೆ ಮಾತ್ರ ದೋಷ ವಂತೆ! ಈ ಆಚಾರವನ್ನು ಕಾಪಾಡಿಕೊಂಡು ಬಂದರೆ ದೊಡ್ಡ ಧಾರ್ಮಿಕ ವ್ಯಕ್ತಿಗಳು ತಾವು ಎಂದು ಭಾವಿಸುವರು."

ಸ್ವಾಮಿಗಳ ಬರವಣಿಗೆಯಲ್ಲಿ ಅಲ್ಲಲ್ಲಿ ಹಿಮಾಲಯದ ಪ್ರಕೃತಿದೃಶ್ಯ ಪರಂಪರೆಯ ಸುಂದರ ವರ್ಣನೆ ಎಷ್ಟು ಕಾವ್ಯಮಯವಾಗಿ ಬಂದಿದೆ! ನದಿ, ಪರ್ವತ, ಶಿಖರ, ಕಾನನ, ಮೇಘಮಾಲೆ, ವಿಶಾಲ ಗಗನ, ಚಂದ್ರೋದಯ, ಹಿಮರಾಶಿ, ತುಷಾರಪಂಕ್ತಿಯ ಮೇಲೆ ಬೀಳುವ ಬಿಸಿಲು ಬೆಳ್ದಿಂಗಳ ವರ್ಣಮಯ ಮೋಹಕತೆ ಮೊದಲಾದ ನೂರಾರು ಚಿತ್ರಗಳು

ಒಮ್ಮೆ ಮುದ್ದಾಗಿ, ಒಮ್ಮೆ ಚೆಲುವಾಗಿ, ಒಮ್ಮೆ ಸುಂದರವಾಗಿ, ಒಮ್ಮೆ ಮಹತ್ತಾಗಿ, ಒಮ್ಮೆ ಭವ್ಯವಾಗಿ ನಾನಾ ಭಾವ ಭಂಗಿಗಳಲ್ಲಿ ನಮ್ಮ ಬಗೆ ಗಣ್ಣಿಗೆ ಸುಳಿಯುತ್ತವೆ! ಭಾರತೀಯ ಸಂಸ್ಕೃತಿ ಈ ರಮಣೀಯ ದರ್ಶನೀಯ ಪ್ರಕೃತಿಸ್ಥಾನಗಳನ್ನು ಹೇಗೆ ಆಧ್ಯಾತ್ಮಿಕತೆಗೆ ಉಪಯೋಗಿಸಿಕೊಂಡಿದೆ ಎಂಬ ವಿಚಾರವಾಗಿ ಲೇಖಕರು ಹೇಳುವ ಈ ಮಾತುಗಳು ಗಮನಾರ್ಹ ವಾಗಿವೆ: ' ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಬಾಹ್ಯ ಪ್ರಕೃತಿ ಸೌಂದರ್ಯವಿರುವಕಡೆ ಜನ ಮಜಾ ಮಾಡಲು ದೊಡ್ಡ ಹೋಟೆಲ್ ತೆರೆಯುವರು. ನಯಾಗರ ಮೊದಲಾದ ಪ್ರಪಾತದ ಕಡೆ ಹಾಗೇ ಇರುವುದು. ಅಲ್ಲಿಗೆ ಹೋಗುವವರು ವಿಲಾಸಿಗಳು. ಆದರೆ ಭರತಖಂಡದಲ್ಲಿ ಪ್ರಕೃತಿಯ ರಮ್ಯ ಸ್ಥಳಗಳಲ್ಲಿ ದೇವಸ್ಥಾನಗಳನ್ನು ನಿರ್ಮಿಸುವರು. ಮಹಾ ಪ್ರಪಾತ, ಪರ್ವತಶಿಖರ, ಸಂಗಮ ಸ್ಥಳಗಳೆಲ್ಲ ದೇವದೇವಿಯರ ನೆನಪು ತರುವುವು. ಅಲ್ಲಿ ತಪಸ್ಸು ಮಾಡಿದ ಋಷಿಗಳನ್ನು ಜ್ಞಾಪಿಸುವುವು. ಅಲ್ಲಿಗೆ ಬರುವ ಯಾತ್ರಿಕರ ತಂಡ ವಿಲಾಸಿಗಳಲ್ಲ. ಸೌಂದರ್ಯವನ್ನು ಭೋಗದ ಕಡೆಗೆ ಬೇಕಾದರೂ ತಿರುಗಿಸಬಹುದು, ತ್ಯಾಗದ ಕಡೆಗೆ ಬೇಕಾದರೂ ತಿರುಗಿಸಬಹುದು. ಪೌರ್ವಾತ್ಯ ಸಂಸ್ಕೃತಿಯಲ್ಲಿ ಪ್ರಕೃತಿ ಸೌಂದರ್ಯವನ್ನು ಬ್ರಹ್ಮಸಾಕ್ಷಾತ್ಕಾರದ ಕಡೆಗೆ ಒಯ್ಯುವ ಸೋಪಾನ ಪಂಕ್ತಿ ಯನ್ನಾಗಿ ಮಾಡಿರುವರು.

ಈ ಪುಸ್ತಿಕೆಯಲ್ಲಿ ಉದ್ದಕ್ಕೂ ಅಲ್ಲಲ್ಲಿ ತಿಳಿಯಾದ ಹಾಸ್ಯದ ಮುಗುಳುನಗೆ ಮಲಪುತ್ತಿರುವುದನ್ನು ನಾವು ನೋಡುತ್ತೇವೆ. ಆ ಹೂಹಾಸ್ಯದ ವಿನೋದ ಶೀಲದ ಕಟುವಲ್ಲದ ವಿಡಂಬನೆಯು ಲೇಖಕರ ಮನೋಧರ್ಮ ಓದುಗರನ್ನು ಯಾವಾಗಲೂ ಒಂದು ಪ್ರಸನ್ನತೆಯ ಸಾನಿಧ್ಯದಲ್ಲಿರಿಸುವುದರಿಂದ ಎಲ್ಲಿಯೂ ಉದ್ರೇಕಾನುಭವಕ್ಕೆ ಎಡೆಗೊಡುವುದಿಲ್ಲ.

ಅವರಿಗೆ ದೊರೆತ ಅಡುಗೆಯವನನ್ನು ಕುರಿತು ವರ್ಣನೆ ಎಷ್ಟುಮೃದು ಹಾಸ್ಯ ರಂಜಿತವಾಗಿದೆ: ' ಆತ ಜಾತಿಯಲ್ಲಿ ಬ್ರಾಹ್ಮಣ ಎಂದ. ಆತನ ವೇಷ ಭೂಷಣಗಳನ್ನು ನೋಡಿದರೆ ಬ್ರಾಹ್ಮಣ್ಯದ ಯಾವ ಚಿಹ್ನೆಯೂ ಕಾಣುತ್ತಿರಲಿಲ್ಲ. ಬಹುಶಃ ಅವನ ಕೋಟಿನ ಒಳಗಡೆ ದೊಡ್ಡದೊಂದು ಜನಿವಾರ ಇದ್ದಿರಬಹುದು!

ಅದೂಕೂಡ ಗಾಯತ್ರಿ ಮಂತ್ರ ಕೇಳಿ, ನೀರಿನ ಸಂಗಮಾಡಿ, ಹಲವು ತಿಂಗಳಾಗಿರಬೇಕು. ಆತ ತೊಟ್ಟ ಒಂದು ಅಂಗಿಯಲ್ಲಿ ಸುಮಾರು ಎಂಟು ಹತ್ತು ತೇಪೆಗಳಿದ್ದುವು ಆ ಕೋಟನ್ನು ಮೊದಲು ಯಾವ ಬಟ್ಟೆಯಿಂದ ಮಾಡಿರ ಬಹುದು ಎಂದು ಹೇಳುವುದೇ ಜಟಿಲ ಪ್ರಶ್ನೆಯಾಗಿತ್ತು. ಆತ ಉಟ್ಟ ಪಂಚೆಯೋ ಫ್ಯಾಕ್ಟರಿಯಲ್ಲಿ ಕೆಲಸಮಾಡುವ ಜನರು ಹಾಕಿಕೊಳ್ಳುವ ಸ್ಪೆಷಲ್ ಉಡುಪನ್ನು ನೆನಪಿಗೆ ತರುತ್ತಿತ್ತು. ಈತ ಹತ್ತಿರ ಬಂದರೆ ಮೂಗನ್ನು ಮುಚ್ಚಿಕೊಳ್ಳ ಬೇಕಾಗಿತ್ತು. ಈತನೇ ನಮ್ಮ ಒಂದು ತಿಂಗಳ Friend, Philosopher, guide ; ಜೊತೆಗೆ Lord Kitchener ಬೇರೆ. ಅವನಿಗೆ ಪ್ರತಿದಿನ ಸ್ನಾನ ಮಾಡಿ ಮಡಿ ಬಟ್ಟೆಯುಟ್ಟು ಅಡಿಗೆಮಾಡು ಎಂದು ಹೇಳಿದೆವು. ಅದಕ್ಕೆ ಆತ ಒಪ್ಪಿಕೊಂಡ. ಸ್ನಾನವನ್ನೇನೋ ದಾರಿಯಲ್ಲಿ ಸಿಕ್ಕುವ ನೀರಿನಲ್ಲಿ ಆತ ಮಾಡ ಬಹುದು. ಆದರೆ ಮಡಿ ಬಟ್ಟೆ ಉಡಬೇಕಾದರೆ ಅವನ ಹತ್ತಿರ ಬೇರೆ ಬಟ್ಟೆಯೇ ಇರಲಿಲ್ಲ. ನಾವೇ ಆತನಿಗೆ ಎರಡು ಪಂಚೆ ತೆಗೆದು ಕೊಟ್ಟು ಇದನ್ನು ಅಡಿಗೆ ಮಾಡುವಾಗ ಮಾತ್ರ ಉಡಬೇಕು ಎಂದೆವು ”

ಆಯಾ ಸನ್ನಿವೇಶಗಳಲ್ಲಿ ಅವುಗಳ ಸಂದರ್ಭವನ್ನು ಗ್ರಹಿಸಿ ಓದಿದಾಗ ಈ ವಾಕ್ಯಗಳು ಎಷ್ಟು ಮಂದಸ್ಮಿತಸುಂದರವಾಗುತ್ತವೆ.

“ ನಾನಂತೂ ಪ್ರಾರ್ಥಿಸುವಾಗ, ಮಧ್ಯೆ ಮಧ್ಯೆ ಭಿನ್ನಾಭಿಪ್ರಾಯಬರದಂತೆ ಅನುಗ್ರಹಿಸು ಎಂದು ಬೇಡಿಕೊಂಡೆ.”

“ ಈ ರಗಳೆಯೆಲ್ಲ ಏತಕ್ಕೆ ಎಂದು, ಇನ್ನೊಂದುಸಲ ವ್ಯಾಕ್ಸಿನೇಷನ್ ಮಾಡಿಸಿಕೊಳ್ಳಲು ನಿಂತೆ.”

“ ಇಷ್ಟರಲ್ಲೆ ಪರ್ಯವಸಾನವಾಯಿತಲ್ಲ. ಇನ್ನೇನಾದರೂ ಆಗಿದ್ದರೆ ಆಕ್ಷೇಪಣೆ ಮಾಡುವುದಕ್ಕೇ ಯಾರೂ ಇರುತ್ತಿರಲಿಲ್ಲ.”

“ ಇಲ್ಲಿ ಬಸ್ಸಿಗೆ ಕಾಯುವುದೇ ಒಂದು ತಪಸ್ಸು ಮಾಡಿದಂತೆ.”

“ ಆ ಹೋಟೆಲಿನ ಗೋಡೆಯ ಮೇಲೆ ಕನ್ನಡ ಅಕ್ಷರಗಳಲ್ಲಿ ದೋಸೆ ಇಡ್ಲಿ ಮೊದಲಾದುವೆಲ್ಲ ದೊರಕುತ್ತವೆ ’ ಎಂದು ಬರೆದಿತ್ತು. ಅದನ್ನು ನೋಡಿ

ಯಾರೊ ಉಡುಪಿ ಬ್ರಾಹ್ಮಣರು ಇರಬಹುದೆಂದು, ಅವರ ಹತ್ತಿರ ಕನ್ನಡ ಮಾತನಾಡಿ, ಸಿಕ್ಕಿದರೆ ದೋಸೆ ಉಪ್ಪಿಟ್ಟು ತಿನ್ನೋಣ ಎಂದು ಹೋದೆವು. ವಿಚಾರಿಸಿದಾಗ ಹೊಟೇಲು ಮಾಲೀಕನಿಗೆ ಕನ್ನಡವೂ ಬಾರದು, ದೋಸೆ ಉಪ್ಪಿಟ್ಟು ಮಾಡುವುದೂ ಬಾರದು. ಹೇಗೆ ಕನ್ನಡದಲ್ಲಿ ಬೋರ್ಡ್ ಬರೆಸಿದೆ ಎಂದಾಗ ಯಾರೊ ಕನ್ನಡ ಮಾತನಾಡುವವರು ಬಂದಿದ್ದಾಗ ಅವರ ಕೈಯಿಂದ ಬರೆಸಿದೆ ಎಂದ. ಅದೆಲ್ಲ ವ್ಯಾಪಾರ ರಹಸ್ಯ !

"ನೊಣಕ್ಕೆ ತೂಕವಿದೆ ಎಂದು ನನಗೆ ಅರಿವಾದದ್ದು ಕೂಡ ಇದೇ ಪ್ರಥಮ."

"ಗೋಧಿ ಹೊಲದಲ್ಲಿ ನಾವು ಫೋಟೋ ತೆಗೆದ ಆ ಹುಡುಗಿಯಂತೆ ಇದ್ದಳು ತಾಯಿ ಗೌರಮ್ಮ."

"ಆ ಎತ್ತರದಲ್ಲಿ ಬೇಳೆ ಬೇಯುವುದಿಲ್ಲವಂತೆ."

"ಅವರ ಸತ್ಯಸಂಕಲ್ಪಕ್ಕೆ ಕೂಲಿಗಳು ಭಂಗ ತಂದರೋ ಅಥವಾ ಅವರ ಸಹಾಯಕ್ಕೇ ಬಂದರೊ ತಿಳಿಯದು."

"ಅದಾದಮೇಲೆ ಉದಕಕುಂಡ ಎಂಬ ಚಿಲುಮೆ ಇದೆ. ಅದರಿಂದ ಜಲಪಾನ ಮಾಡಿದವರಿಗೆ ಪುನರ್ಜನ್ಮವಿಲ್ಲವೆಂದು ದೊಡ್ಡ ಅಕ್ಷರಗಳಲ್ಲಿ ಬರೆದಿರುವರು. ಆ ಜಲಪಾನಕ್ಕೆ ಅರ್ಧಾಣೆ ಮಾತ್ರ ಖರ್ಚು. ಜನನಮರಣಗಳ ಕೋಟಲೆಗಳಿಂದ ಪಾರಾಗುವುದು ಬಹಳ ಸುಲಭ ಇಲ್ಲಿ"

"ಶಿವನಿಗೇನು ಅನಂತಕಾಲವಿದೆ ಮುಂದೆ. ಕಾಲಹರಣಕ್ಕೆ, ಪಾರ್ವತಿಯ ಮನರಂಜನೆಗೆ ಬೇಕಲ್ಲ ಕಥೆಗಳು ?"

"ಪಾಪ, ಹಿಮಾಲಯದ ಕಲ್ಲು ಗಿಡ ಮರಗಳೆಲ್ಲ, ಭಗವಂತನ ಹೆಸರನ್ನಲ್ಲ, ಔಷಧಿ, ಪಂಚಾಯತ ರಾಜ್ಯ, ಪುಸ್ತಕಭಂಡಾರದ ಹೆಸರನ್ನು ಹೊತ್ತು ತಪಸ್ಸು ಮಾಡುತ್ತಿವೆ."

"ಸ್ವಲ್ಪ ನಿದ್ದೆ ಬಂತೋ ಇಲ್ಲವೋ ಕನಸಿನಲ್ಲಿಯೂ ಗಂಟು ಮೂಟೆ ಕಟ್ಟುತ್ತಿರುವುದು, ನಡೆಯುತ್ತಿರುವುದೇ ಚಿತ್ರ. ನಮ್ಮ ಜೀವನದ ಪೂರ್ವ ಸ್ಮೃತಿಯೆಲ್ಲ ಅಳಿಸಿಹೋಗಿತ್ತು. ಮೂಟೆಕಟ್ಟುವುದು ನಡೆಯುವುದೆ ನಮ್ಮ ಜಾಗ್ರದವಸ್ಥೆಯ ಮತ್ತು ಕನಸಿನ ಪ್ರಪಂಚ ಕೂಡಾ ಆಗಿಹೋಗಿತ್ತು."

"ಅವರಿಗೆ ಹಸಿ ಸಾಸುವೆ ಜನ ತಿನ್ನುತ್ತಾರೆಯೆ ಎಂದು ಆಶ್ಚರ್ಯ. ನಮಗೆ ಜನ ಸಾಸುವೆ ಎಣ್ಣೆ ಊಟಕ್ಕೆ ಉಪಯೋಗಿಸುತ್ತಾರೆಯೆ ಎಂದು ಆಶ್ಚರ್ಯ."

"ನೀರು ಅಷ್ಟು ಚಳಿ. ಈ ಪ್ರಾಯಶ್ಚಿತ್ತ ನಾವು ಮಾಡಿರುವ ಪಾಪದ ಸಾಲದಲ್ಲಿ ಯಾವುದಾದರೂ ಒಂದಂಶವನ್ನಾದರೂ ಕಳೆದೇ ಕಳೆಯುವುದು. ನಾನಂತೂ ಸ್ನಾನ ಮಾಡಲಿಲ್ಲ. ಅದರ ನೀರನ್ನು ಕೊಂಚ ತೆಗೆದುಕೊಂಡು ತಲೆಗೆ ಪ್ರೋಕ್ಷಣೆ ಮಾಡಿಕೊಂಡೆ."

"ಇದುವರೆಗೆ ನಮಗೆ ಕಾಣದ ಜನಿವಾರ ಹೊರಗೆ ಕಂಡಿತು."

"ಈ ಮಂತ್ರ ಒಂದು ಗೊತ್ತಿದ್ದರೆ ವರ್ಷದಲ್ಲಿ ಆರು ತಿಂಗಳ ಜೀವನಕ್ಕೆ ಯಾವ ಆತಂಕವೂ ಇಲ್ಲ. ನಮ್ಮ ಜನ ದೇವರು ಧರ್ಮದ ಹೆಸರಿನಲ್ಲಿ ಕಾಸು ಬಿಚ್ಚುತ್ತಾರೆ. ಸ್ವಲ್ಪ ಆಲೋಚನೆ ಮಾಡಿದರೆ ಪುನರ್ಜನ್ಮವಿಲ್ಲವೆಂದು ಕೊನೆಗೆ ಸಾರುವುದರಿಂದ ಒಂದೇಸಲ ಮುಕ್ತಿ ಪ್ರಾಪ್ತಿಯಾಗಿ ನಮ್ಮ ಸ್ವರ್ಗಸುಖಕ್ಕೆಲ್ಲ ತಿಲತರ್ಪಣ ಕೊಟ್ಟಂತೆಯೆ!"

"ನಮ್ಮಲ್ಲಿ ಕೆಲವರು ಮಾಡುವ ತೀರ್ಥಯಾತ್ರೆಯೂ ಹೀಗೆಯೆ. ಮೇಲೆ ಮಾತ್ರ ಮುದ್ರೆ, ಒಳಗೆ ಯಾವ ಪರಿಣಾಮವೂ ಆಗುವುದಿಲ್ಲ."

ಇಲ್ಲಿ ಬರುವ ಸ್ಥಳಗಳೆಲ್ಲ ಪವಿತ್ರ ಕ್ಷೇತ್ರಗಳೆ. ಎಲ್ಲದಕ್ಕೂ ಒಂದೊಂದು ಕಥೆಯೊ ಚರಿತ್ರೆಯೊ ಅಂಟಿರುತ್ತದೆ. ಒಂದೊಂದರ ಮಹಾತ್ಮೆಯನ್ನು ಸಾರುವುದಕ್ಕೂ ಒಂದೊಂದು ಸ್ಥಳಪುರಾಣವಿರುತ್ತದೆ. ಇಲ್ಲಿ ಶಂಕರಾಚಾರ್ಯರು ತಪಸ್ಸು ಮಾಡಿದರು. ಇಲ್ಲಿ ರಾವಣ ತಪಸ್ಸುಮಾಡಿದ್ದು. ಇಲ್ಲಿ ರಾಮ ತಪಸ್ಸು ಮಾಡಿ ಶಿವನಿಗೆ ತನ್ನ ಕಣ್ಣನ್ನೆ ಅರ್ಪಿಸಿದ್ದು. ಹೀಗೆಲ್ಲ ಎಲ್ಲಿ ನೋಡಿದರೂ ಪುರಾಣಗಳಿಗೂ ಭಾರತಕ್ಕೂ ರಾಮಾಯಣಕ್ಕೂ ಸಂಬಂಧಪಟ್ಟಂತೆ ಕ್ಷೇತ್ರ ಮಹಾತ್ಮೆ ವರ್ಣಿತವಾಗುತ್ತದೆ. ಆದರೆ ಇದನ್ನೆಲ್ಲ ನಾವು ನಡೆದ ಚರಿತ್ರೆ ಎಂದು ನಂಬುವುದು ಅನಾವಶ್ಯಕ. ಅವುಗಳ ಉದ್ದೇಶ ಸಂಪೂರ್ಣವಾಗಿ ಭಾವೋಪಯೋಗಿಯೆ ಹೊರತು ಲೋಕೋಪಯೋಗಿ ಯಲ್ಲ. ಸಾಹಿತ್ಯದಲ್ಲಿ ನಾವು ನಾಮಪದಕ್ಕೆ ವಿಶೇಷಣವನ್ನು ಹಚ್ಚಿ ವಸ್ತುವಿನ ಗುಣೋತ್ಕರ್ಷವನ್ನು ಅನುಭವಕ್ಕೆ ತಂದುಕೊಡಲು ಪ್ರಯತ್ನಿಸುವಂತೆ ಸ್ಥಳ

ಗಳಿಗೂ ಒಂದು ಪವಿತ್ರವೂ ಪ್ರಸಿದ್ಧವೂ ಆದ ವ್ಯಕ್ತಿಯ ಅಥವಾ ಕಥಾಪ್ರತಿಮೆಯ ವಿಶೇಷಣವನ್ನು ಹಚ್ಚಿ ಯಾತ್ರಿಕರಲ್ಲಿ ಭಾವೋತ್ಕರ್ಷವನ್ನುಂಟುಮಾಡುವುದಕ್ಕಾಗಿಯೆ ಸ್ಥಳಪುರಾಣಗಳು ಹುಟ್ಟಿಕೊಂಡಿವೆ. ಆದ್ದರಿಂದಲೆ ಭರತಖಂಡದ ಯಾವ ಪುಣ್ಯಸ್ಥಳಕ್ಕೆ ಹೋದರೂ ರಾಮಾಯಣ ಮಹಾಭಾರತ ಪುರಾಣಾದಿಗಳ ಕಥೆ ಅಲ್ಲಿ ಒಂದಲ್ಲ ಒಂದು ನಡೆದೆ ಇರುತ್ತದೆ. ಯಾರೊ ತಪಸ್ಸು ಮಾಡಿಯೆ ಇರುತ್ತಾರೆ. ಯಾವ ತೀರ್ಥವಾದರೂ ಆಗಲಿ ಪರಶುರಾಮ ತಾಯಿಯನ್ನು ಕಡಿದ ಕೊಡಲಿಯನ್ನು ಅಲ್ಲಿ ದೊಳದೆ ತೀರಬೇಕು!

ಲೇಖಕರು ಅಲ್ಲಲ್ಲಿ ಅತ್ಯಂತ ಉಚಿತವಾದ ಉನ್ನತವಾದ ಸಂದರ್ಭಗಳಲ್ಲಿ ಸ್ತುತಿ ಸ್ತೋತ್ರ ದಶಕಾದಿಗಳನ್ನೂ ಅವುಗಳ ಕನ್ನಡ ಅನುವಾದಗಳನ್ನೂ ಕೊಟ್ಟಿರುವುದು ಯಾತ್ರೆಯ ಪವಿತ್ರಾನುಭವಕ್ಕೆ ಕಲಶವಿಟ್ಟಂತಾಗುತ್ತದೆ. ಓದುಗರು ತಮ್ಮ ಕಲ್ಪನೆಯಲ್ಲಿ ಆಯಾ ಉತ್ತುಂಗ ಹೈಮಾಚಲ ಶಿಖರಗಳನ್ನೇರಿ ಕುರಿತು ಹಾಡಿಕೊಂಡರೆ ಅವುಗಳ ದಿವ್ಯ ಪ್ರಭಾವದಿಂದ ದರ್ಶನಾನ್ವಿತರಾಗಿ ಶಾಂತರಸಾನುಭವವನ್ನು ಆಸ್ವಾದಿಸುವುದರಲ್ಲಿ ಸಂದೇಹವಿಲ್ಲ.

ಬದುಕಿನ ಗುರಿ ಶಾಂತಿ. ಬದುಕನ್ನು ವಿಷಯವಾಗುಳ್ಳ ಸಾಹಿತ್ಯದ ಕೊನೆಯ ಗುರಿಯೂ ಶಾಂತರಸಾಸ್ವಾದನೆಯೆ. ಅವೆರಡೂ ಆಗಿರುವ ಈ ಹೈಮಾಚಲ ಸಾನ್ನಿಧ್ಯ ಯಾತ್ರೆಯ ಪರಿಣಾಮ ತಾನೆ ಹೇಗೆ ಬೇರೆಯಾದೀತು? ಬರೆದವರೂ ಕಾಷಾಯಧಾರಿ!

ಮೈಸೂರು
೧೮–೯–೧೯೫೮

**ಕುವೆಂಪು**

# ಪ್ರಕಾಶಕನ ಬಿನ್ನಹ

ಶ್ರೀ ಸ್ವಾಮಿ ಸೋಮನಾಥಾನಂದರ ಎರಡನೆಯ ಪ್ರವಾಸ ಗ್ರಂಥವಾದ ಈ 'ಹೈಮಾಚಲ ಸಾನ್ನಿಧ್ಯದಲ್ಲಿ' ಅನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸುವುದು ನನಗೊಂದು ಹೆಮ್ಮೆ. ಶ್ರೀ ಸ್ವಾಮಿಜಿಯವರ ಪ್ರಥಮ ಪ್ರವಾಸ ಗ್ರಂಥವಾದ 'ಅಮರನಾಥ ಯಾತ್ರೆ' ಯಂತೆ ಕೇದಾರನಾಥಯಾತ್ರೆ ಬದರೀನಾಥ ಯಾತ್ರೆ ಗಳನ್ನು ಒಳಗೊಂಡ ಈ 'ಹೈಮಾಚಲ ಸಾನ್ನಿಧ್ಯದಲ್ಲಿ' ಯೂ ಅತ್ಯಂತ ಜನಪ್ರಿಯವಾಗುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ, ಮೊದಲ ಗ್ರಂಥದಲ್ಲಿ ಕಾಣ ಬರುತ್ತಿದ್ದ ನಿರೂಪಣಾಸ್ವಾರಸ್ಯ ಇಲ್ಲಿ ಸಂಪೂರ್ಣವಾಗಿ ಅರಳಿ ಮಘಮಘಿಸು ತ್ತಿದೆ. ಶ್ರೀ ಸ್ವಾಮಿಗಳು ಕೇವಲ ಸಂಪ್ರದಾಯ ಶೀಲರಾದ ಅಂಧ ಶ್ರದ್ಧೆಯ ಯಾತ್ರಿಕರಲ್ಲ; ಹಿಮಾಲಯದ ಪ್ರಕೃತಿಯ ಸನ್ನಿಧಾನದಲ್ಲಿ ನಿಂತಾಗ ಅವರ ಸುಸಂಸ್ಕೃತ ಚೇತನ ದಿವ್ಯತೆಯ ದರ್ಶನ ಸಾಕ್ಷಾತ್ಕಾರಗಳಿಂದ ಧನ್ಯವಾಗುತ್ತದೆ; ಆ ಅನುಭವವನ್ನು ಹೃದಯಂಗಮವಾಗಿ ವರ್ಣಿಸುತ್ತಾರೆ, ಶ್ರೀ ಸ್ವಾಮಿಗಳು. ತಾವು ಕಂಡುಂಡ ಸುಂದರ ದೃಶ್ಯಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ; ತಾವು ಸಂಧಿಸಿದ ಜನರ ಶೀಲಸ್ವಭಾವಗಳನ್ನು, ಆಚಾರ ವ್ಯವಹಾರ ಗಳನ್ನು, ರೀತಿನೀತಿಗಳನ್ನು ಆತ್ಮೀಯವಾಗಿ ವಿವರಿಸುತ್ತಾರೆ; ಅರ್ಥರಹಿತ ಸಂಪ್ರದಾಯಗಳಲ್ಲಿ ಜನರಿಗಿರುವ ಅಂಧಶ್ರದ್ಧೆಗಳನ್ನು ಕಂಡಾಗ ಅನುಕಂಪಯುಕ್ತವಾದ ಹುಸಿನಗೆಯೊಡನೆ ಅದನ್ನು ಟೀಕಿಸುತ್ತಾರೆ; ಜನರ ಮನೋದೌರ್ಬಲ್ಯವನ್ನು ಸ್ವಲಾಭಕ್ಕೆ ಹೆದ್ದಾರಿ ಮಾಡಿಕೊಂಡಿರುವ ಸ್ವಾರ್ಥಿಗಳನ್ನು ಒಮ್ಮೊಮ್ಮೆ ವಿಡಂಬನೆಯಿಂದ, ಒಮ್ಮೊಮ್ಮೆ ಕಟುನುಡಿಗಳ ಗದಾಪ್ರಹಾರದಿಂದ ಖಂಡಿಸಿದ್ದಾರೆ. ಗ್ರಂಥದ ಉದ್ದಕ್ಕೂ ಬಳಸಿರುವ ಭಾಷೆ ಸರಳವಾಗಿರುವಷ್ಟೇ ಸುಲಭವಾಗಿದೆ, ಸಂಗ್ರಹವಾಗಿದೆ; ಬರೆಹ ರಸವತ್ತಾಗಿದೆ; ಓದಲು ಆರಂಭಿಸಿದರೆ ಕೆಳಗಿಡವಷ್ಟು ರಮ್ಯವಾಗಿದೆ. ಇಂತಹ ಸೊಗಸಾದ ಪುಸ್ತಕವನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಅನುಮತಿಯಿತ್ತು, ಕನ್ನಡದಲ್ಲಿ

ಅತ್ಯಂತ ವಿರಳವಾಗಿರುವ ಪ್ರವಾಸ ಸಾಹಿತ್ಯವನ್ನು ಸುಪುಷ್ಟಗೊಳಿಸಲು ನೆರವಾದ ಶ್ರೀ ಸ್ವಾಮಿ ಸೋಮನಾಥಾನಂದರಿಗೆ ನಾನು ಕೃತಜ್ಞನಾಗಿದ್ದೇನೆ.

ನನ್ನ ವಿದ್ಯಾಗುರುಗಳೂ ಸೋದರ ಸಮಾನರೂ ಆದ ಶ್ರೀ ಕುವೆಂಪು ರವರು ತಮ್ಮ ಕವಿಋಷಿ ಸಹಜವಾದ ಅಮರವಾಣಿಯಿಂದ ಈ ಪುಸ್ತಕಕ್ಕೊಂದು ದಿವ್ಯವಾದ ಮುನ್ನುಡಿಯನ್ನು ಬರೆದುಕೊಟ್ಟು, ಕಾವ್ಯದ ಬೆಲೆಯನ್ನು ಅಮೂಲ್ಯ ವಾಗಿ ಮಾಡಿದ್ದಾರೆ. ಅವ್ಯಾಜವಾದ ಅವರ ಪ್ರೇಮಕ್ಕೆ ನಾನು ಚಿರಋಣಿ. ಅವರಿಗೆ ನನ್ನ ಭಕ್ತಿಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ.

ಮೈಸೂರು

**ತ. ಸು. ಶಾಮರಾಯ**
ಸಂಪಾದಕ

೧

# ಹರಿದ್ವಾರ

ಹಿಂದೆ ೧೯೫೦ ರಲ್ಲಿ ಕಾಶ್ಮೀರದ ತುದಿಯಲ್ಲಿ ಹಿಮಾಲಯ ಪರ್ವತ ಸ್ತೋಮದಲ್ಲಿ ಹುದುಗಿರುವ ಅಮರನಾಥನ ದರ್ಶನಕ್ಕೆ ಹೋಗಿದ್ದೆ. ಕಾಶ್ಮೀರದ ಕಣಿವೆ ಸೌಂದರ್ಯದ ನೆಲೆವೀಡು. ಅದನ್ನು ದಾಟಿದಮೇಲೆ ಹಿಮಾಲಯದಲ್ಲಿ ಸುಮಾರು ೧೩೦೦೦ ಅಡಿ ಎತ್ತರದಲ್ಲಿರುವ ಬೃಹದಾಕಾರದ ಗುಹೆಯಲ್ಲಿ ಹಿಮಲಿಂಗವನ್ನು ನೋಡಲು ಹೋದಾಗ ದಾರಿಯಲ್ಲಿ ಸಿಕ್ಕುವ ಅನಂತ ಸೌಂದರ್ಯದೇಗುಲಕ್ಕೆ ಮುಗ್ಧನಾಗಿದ್ದೆ. ಹಿಮಾಲಯದ ಪರ್ವತ ಸ್ತೋಮದಲ್ಲಿ ಒಂದು ಆಕರ್ಷಣ ಶಕ್ತಿ ಇದೆ. ಮುಗಿಲ ಪಂಕ್ತಿಯನ್ನು ಭೇದಿಸಿಕೊಂಡು ಗಗನಕ್ಕೆ ತೂರಿಹೋಗಿರುವ ಆ ಶಿಖರಗಳು ತುಷಾರವೇಷಧಾರಿಗಳಾಗಿ ಆನಂತಾತ್ಮನ ನಿತ್ಯಪೂಜೆಯಲ್ಲಿ ನಿರತವಾಗಿರುವಂತೆ ಭಾಸವಾಗುವುದು. ಜಗದ ಸಂತೆಯನ್ನು ಸಾಕ್ಷಿಯಂತೆ ನಿಂತು ನೋಡುತ್ತಿವೆ. ಸುಮಾರು ಐನೂರು ಮೈಲಿ ಅಗಲ ೧೫೦೦ ಮೈಲಿ ಉದ್ದವಿರುವ, ಭಗವಂತನ ಪ್ರತಿನಿಧಿಯಂತಿರುವ ಹಿಮಾಲಯ ಪರ್ವತಸ್ತೋಮ. ಅಟ್ಟಹಾಸದಿಂದ ಮೇಲೆದ್ದು, ವಿಸ್ತರಿಸಿ, ಕಾಲಗರ್ಭದಲ್ಲಿ ಪುನಃ ಮಾಯವಾದ ಎಷ್ಟು ಚಕ್ರಾಧಿಪತ್ಯಗಳನ್ನು ನೋಡಿದೆಯೋ ಈ ಬೃಹತ್ ಮೂಕಸಾಕ್ಷಿ. ದೈನಂದಿನ ಬಾಳುವೆಯಲ್ಲಿ ಅಳು ನಗು, ಲಾಭನಷ್ಟ, ಸುಖದುಃಖಗಳ ತುಮುಲದಲ್ಲಿ ಸಿಕ್ಕಿ ಒದ್ದಾಡುತ್ತಿರುವ ಭವಸಾಗರದ ಅಲೆಯಮೇಲಿನ ನೊರೆಗಳನ್ನು ನಿತ್ಯ ನೋಡುತ್ತಿದೆ. ಆ ಹಿಮಾಲಯದ ನಿರ್ಜನತೆ, ನೀರವತೆ, ಭವಕೂಪದಲ್ಲಿ ಬೆಂದು ನೊಂದವರಿಗೊಂದು

ಭೇಷಜದಂತೆ ಇದೆ. ಅಲ್ಲಿ ಎಲ್ಲಿ ನೋಡಿದರೂ ಭೂಮಮಯ; ಅಲ್ಪವೆಂಬುದರ ಭಾವನೆಯೇ ಬರುವುದಿಲ್ಲ. ಅಲ್ಲಿರುವ ಪ್ರಥಮ ದರ್ಜೆಯ ಗಿರಿಶಿಖರಗಳೂ ಎಲ್ಲಾ ಸುಮಾರು ೨೦ ಸಾವಿರ ಅಡಿಯ ಮೇಲೆ. ನಮ್ಮ ಮೈಸೂರು ಬೆಟ್ಟಗಳು ಪಕ್ಕದಲ್ಲಿ ನಿಂತರೆ ಅದರ ಮೊಳಕಾಲಿಗೂ ಬರಲಾರವು. ಅಲ್ಲಿರುವ ದೇವದಾರು, ಪೈನ್ ಮರಗಳೊ ನೂರು ಇನ್ನೂರು ಅಡಿ ಲೀಲಾಜಾಲವಾಗಿ ಬೆಳೆಯುವುವು. ಹಿಮಕರಗಿ ನೆಗೆದಾಡುವ ಗಿರಿಝರಿಗಳಂತೂ ೨೦೦, ೩೦೦, ೪೦೦ ಅಡಿಗಳನ್ನು ಒಂದೊಂದು ನೆಗೆತನದಲ್ಲಿ ಪೂರೈಸಿಕೊಂಡು ಬರುವುವು. ಅಲ್ಪ ಭಾವನೆಗೆ ಅಲ್ಲಿ ಎಡೆಯೇ ಇಲ್ಲ. ಯಾತ್ರಿಕ ಹಿಮಾಲಯದ ಮಡಿಲೊಳಗೆ ಇರುವವರೆಗೆ, ಗಗನವನ್ನು ಚುಂಬಿಸುವ, ಮರ್ತ್ಯದಿಂದ ಅಮೃತದ ಕಡೆಗೊಯ್ಯುವ, ಭೂಮಭಾವನೆಗಳೇ ಸಂಚರಿಸುತ್ತಿರುತ್ತವೆ. ಅವನ ಮನದೊಳಗೆ.

ಕೇದಾರನಾಥ, ಬದರೀನಾಥ, ಹಿಂದೂಗಳೆಲ್ಲರಿಗೂ ಪವಿತ್ರಸ್ಥಳವೆಂದು ಹಿಂದಿನಿಂದಲೂ ಪ್ರಖ್ಯಾತವಾಗಿವೆ. ಹಿಂದೂಧರ್ಮ ನಮ್ಮ ಭರತಖಂಡವನ್ನು ಒಂದುಗೂಡಿಸಿದಂತೆ ಯಾವ ರಾಜಕೀಯವೂ ಕೂಡಿಸಿಲ್ಲ. ಪವಿತ್ರ ನದಿಗಳನ್ನು ಉಚ್ಚರಿಸುವಾಗ ಗಂಗಾ, ಯಮುನಾ ಗೋದಾವರಿ ನರ್ಮದ ಸರಸ್ವತಿ ಸಿಂಧು ಕಾವೇರಿ ಎಂದು ಉತ್ತರದಿಂದ ದಕ್ಷಿಣದವರೆಗೆ ಬರುವರು. ನಾಲ್ಕು ಮುಖ್ಯ ದೇವಸ್ಥಾನಗಳನ್ನು ವಿವರಿಸುವಾಗ ಬದರಿ, ಜಗನ್ನಾಥ, ರಾಮೇಶ್ವರ, ದ್ವಾರಕ ಎಂದು ಇಡೀ ಭರತಖಂಡವನ್ನೆಲ್ಲ ಒಂದು ಪ್ರದಕ್ಷಿಣೆಮಾಡುವರು. ಯಾವ ಮೂಲೆಗೆ ಸೇರಿರಲಿ ಹಿಂದೂ ಈ ದೇವಸ್ಥಾನಗಳನ್ನು ನೋಡಬೇಕು. ಈ ಪವಿತ್ರ ತೀರ್ಥದಲ್ಲಿ ಮೀಯಬೇಕು ಎಂಬ ಭಾವನೆ ಬಂದುಹೋಗಿದೆ. ಭರತವರ್ಷ ಭರತಖಂಡದ ಚತುರ್ದಿಕ್ಕುಗಳೂ ಪವಿತ್ರ ಎಂಬ ಭಾವನೆ ಮೂಡಿದ್ದೇ ಧರ್ಮದಿಂದ.

ಕೇದಾರನಾಥ ಬದರೀನಾರಾಯಣ ದೇವಸ್ಥಾನಗಳು ವರುಷವೆಲ್ಲಾ ತೆರೆದ ದೇವಾಲಯಗಳಲ್ಲ. ಒಂದು ವರುಷದಲ್ಲಿ ಆರುತಿಂಗಳು ಮಾತ್ರ ತೆರೆದಿರುತ್ತವೆ. ಹಿಮಾಲಯದ ಹಿಮ ಇನ್ನಾರುತಿಂಗಳು ನರಪ್ರಾಣಿ ಸಂಚಾರಕ್ಕೆ ಸಾಧ್ಯವಾಗ

ದಂತೆ ಮಾಡುತ್ತದೆ. ಅದು ತೆರೆಯುವುದು ಏಪ್ರಿಲ್ ಕೊನೆಯವಾರ, ಇಲ್ಲವೆ ಮೇ ಮೊದಲನೆವಾರ. ಆಕ್ಟೋಬರ್ ಕೊನೆಯವಾರದಲ್ಲಿ ಪೂಜೆಮಾಡಿ ವರುಷದ ಕೊನೆ ಮಂಗಳಾರತಿ ಮಾಡಿ ಕದಹಾಕಿದರೆ ಪುನಃ ಅದನ್ನು ತೆಗೆಯ ಬೇಕಾದರೆ ಇನ್ನಾರು ತಿಂಗಳು ಸಾಗಬೇಕು. ಅದುವರೆಗೆ ದೇವಸ್ಥಾನ ಸುತ್ತಲಿರುವ ಮನೆ ಅಂಗಡಿ ಮಳಿಗೆಗಳೆಲ್ಲ ಹಿಮದಿಂದ ಆವೃತವಾಗಿ ಕಣ್ಣಿಗೇ ಕಾಣಿಸವು. ಅನಂತರ ಬೇಸಿಗೆಕಾಲದಲ್ಲಿ ಹಿಮ ಕರಗಿದಮೇಲೆ ಅವ್ಯಕ್ತದಿಂದ ವ್ಯಕ್ತ ಪ್ರಪಂಚಬಂದಂತೆ ಪುನಃ ಅವು ರೂಪತಾಳುವುವು. ಆರುತಿಂಗಳು ಪ್ರತಿದಿನ ಬಂದು ಹೋಗುವ ನೂರಾರುಜನ ಭಕ್ತರು ಅಂಗಡಿ ಮುಂಗಟ್ಟುಗಳಿಂದ ನಗರ ದಂತೆ ಜಗಿಜಗಿಯುತ್ತಿರುವುದು. ಅನಂತರ ಇನ್ನಾರು ತಿಂಗಳು ಹಿಮಾವೃತವಾಗಿ ನಿರ್ಜನತೆ ನೀರವತೆಯೆ ರೂಪುವೆತ್ತಂತೆ ಇರುವುದು, ಮಹಾಯೋಗಿಯ ನಿರ್ವಿಕಲ್ಪ ಸಮಾಧಿಯಂತೆ.

ಮೈಸೂರಿನಿಂದ ಕೇದಾರ ಬದರಿನಾಥಕ್ಕೆ ಹೋಗಬೇಕಾದರೆ ಮೊದಲು ಡೆಲ್ಲಿಗೆ ಹೋಗಿ ಅಲ್ಲಿಂದ ಹರಿದ್ವಾರಕ್ಕೆ ಹೋಗಬೇಕು. ಹರಿದ್ವಾರದಿಂದ ಹೃಷೀಕೇಷಕ್ಕೆ ರೈಲು ಅಥವಾ ಬಸ್ಸಿನಲ್ಲಿ ಹೋದರೆ ಅಲ್ಲಿಂದ ರುದ್ರಪ್ರಯಾಗ ದವರೆಗೆ ಸುಮಾರು ೮೮ ಮೈಲಿಗಳು ಬಸ್ಸಿನಲ್ಲಿ ಹಿಮಾಲಯದ ಮೇಲೆ ಹೋಗ ಬೇಕು. ರುದ್ರಪ್ರಯಾಗದಿಂದ ಕೇದಾರನಾಥಕ್ಕೆ ೪೮ ಮೈಲಿಗಳು ನಡೆದುಕೊಂಡು ಹೋಗಿ ಅದೇ ದಾರಿಯಲ್ಲಿ ೨೪ ಮೈಲಿ ಹಿಂತಿರುಗಿ ಬಂದು, ಅಲ್ಲಿಂದ ಬಲಗಡೆಗೆ ತಿರುಗಿಕೊಂಡು ೭೮ ಮೈಲಿ ನಡೆದರೆ ಬದರಿನಾಥ ಸಿಕ್ಕುವುದು. ಪುನಃ ಬದರಿ ನಾಥದಿಂದ ೩೮ ಮೈಲಿ ಇಳಿದುಬಂದರೆ ಪಿಪ್ಪಲ್‌ಕೋಟಿ ಎಂಬ ಊರಿಗೆ ಬರುತ್ತೇವೆ. ಅಲ್ಲಿಂದ ಹೃಷೀಕೇಶದತನಕ ಸುಮಾರು ೧೩೦ ಮೈಲಿಗಳು ಬಸ್ಸಿದೆ. ಬಸ್ಸಿನಲ್ಲಿ ಹೋಗುವ ದಾರಿಯನ್ನು ಕಳೆದರೆ ಕಾಲುನಡಗೆಯಲ್ಲಿ ಸುಮಾರು ಇನ್ನೂರು ಮೈಲಿಗಳನ್ನು ನಡೆಯಬೇಕು. ಹದಿನೈದು ವರುಷಗಳ ಹಿಂದೆ ಹೋಗಿದ್ದರೆ ನಾನ್ನೂರ ಐವತ್ತು ಮೈಲಿಗಳನ್ನೂ ನಡೆದುಕೊಂಡೇ ಹೋಗ ಬೇಕಾಗಿತ್ತು. ಈಗ ಅದಕ್ಕಿಂತ ಹೆಚ್ಚು ಬಸ್ಸಿನಲ್ಲಿ ಹೋಗಬಹುದು. ಇನ್ನು ಕೆಲಸವು ವರುಷಗಳ ನಂತರ ಹೋದರೆ ಇನ್ನೂ ಹೆಚ್ಚು ಮೈಲಿ ಬಸ್ಸಿನಲ್ಲಿಯೆ ಪ್ರಯಾಣ ಮಾಡಬಹುದು.

ನಾವು ಏಪ್ರಿಲ್ ತಿಂಗಳ ಕೊನೆಗೆ ಹೊರಟು ಹರಿದ್ವಾರವನ್ನು ಸೇರಿದೆವು. ಹರಿದ್ವಾರವೆಂಬ ಹೆಸರು ಸೂಚಿಸುವಂತೆಯೆ ಅದು ಬದರಿಯಲ್ಲಿರುವ ಹರಿಯ ಎಡೆಗೆ ಇರುವ ರಸ್ತೆ. ಹರಿದ್ವಾರ ಗಂಗಾತೀರದಲ್ಲಿದೆ. ಗಂಗಾನದಿ ಇದುವರೆಗೆ ಬೆಟ್ಟ ಗುಡ್ಡಗಳ ಕಣಿವೆಗಳಲ್ಲಿ ಭೋರ್ಗರೆದು ಹರಿಯುತ್ತ ಇಲ್ಲಿ ಸಮಭೂಮಿಯನ್ನು ಮುಟ್ಟುವುದು. ಇಲ್ಲಿ ಆ ಘರ್ಜನೆಯೆಲ್ಲಾ ನಿಂತುಹೋಗಿ ಸಾವಧಾನದಿಂದ ಮಂದಗಮನೆಯಾಗಿ ಮುಂದೆ ಹರಿದು ಹೋಗುವಳು. ಬ್ರಹ್ಮಕುಂಡವೆಂಬ ಒಂದು ಘಾಟು ಹರಿದ್ವಾರದಲ್ಲೆಲ್ಲಾ ಬಹು ಪುಣ್ಯಸ್ಥಾನವೆಂದು ಪ್ರಖ್ಯಾತವಾಗಿದೆ. ಸಹಸ್ರಾರುಜನ ಇಲ್ಲಿ ಸ್ನಾನಮಾಡಲು ಬರುತ್ತಾರೆ. ಜನ್ಮ ಜನ್ಮಾಂತರಗಳ ಪಾಪವೆಲ್ಲ ಒಂದು ಮುಳುಗಿನಲ್ಲೇ ನಾಶವಾಗುತ್ತದೆ ಎಂದು ಸ್ಥಳ ಪುರಾಣ ಸಾರುತ್ತದೆ. ಅದಲ್ಲದೆ ಪ್ರತಿಯೊಬ್ಬ ಹಿಂದೂಗೆ ಗಂಗಾನದಿ ಎಂದರೆ ಪ್ರಪಂಚದಲ್ಲೆಲ್ಲಾ ಅತಿ ಪೂಜ್ಯವಸ್ತು. ದಕ್ಷಿಣದೇಶದ ಯಾವುದೋ ಒಂದು ಮೂಲೆಯಿಂದ ಬಂದು ಇಲ್ಲಿ ಮಿಂದಾದಮೇಲೆ ಗಂಗಾವಾರಿಯನ್ನು ಹಿಂತಿರುಗಿ ಹೋಗುವಾಗ ಸಣ್ಣ ಥಾಲಿಯಲ್ಲಿ ತೆಗೆದುಕೊಂಡು ಹೋಗುವರು. ನಂಟರಿಷ್ಟರಿಗೆ ಕೊಡುವರು. ಹಬ್ಬ ಹರಿದಿನಗಳನಲ್ಲಿ ಅದನ್ನು ಪೂಜಿಸುವರು. ಅವಸಾನಸಮಯದಲ್ಲಿ ಹತ್ತಿರ ಯಾರಾದರೂ ನಂಟರಿಷ್ಟರಿದ್ದರೆ ಗಂಗಾನದಿಯ ಒಂದೆರಡು ತೊಟ್ಟನ್ನು ಬಾಯಿಗೆ ಬಿಡುವರು. ಸ್ವಾಮಿ ವಿವೇಕಾನಂದರು ಹೇಳುವಂತೆ ಗೀತಾ ಗಂಗಾ ಇವೆರಡೇ ಹಿಂದೂ ಸಂಸ್ಕೃತಿಯ ಪ್ರತೀಕ. ಭರತಖಂಡದ ಯಾವ ಮೂಲೆಯಲ್ಲಿರಲಿ, ಒಂದೆರಡು ಗೀತಾ ಶ್ಲೋಕ ಬಾಯಿನಲ್ಲಿ ಪಾರಾಯಣಕ್ಕೆ, ಮನೆಯಲ್ಲಿ ಪೂಜಿಸುವುದಕ್ಕೆ ಒಂದೆರಡು ಬಿಂದು ಗಂಗಾವಾರಿ ಇದ್ದೇ ಇರುತ್ತದೆ. ಜನರಿಗೆ ಗಂಗೆಯ ಮೇಲಿರುವ ಭಕ್ತಿಯನ್ನು ನೋಡಬೇಕಾದರೆ ಹರಿದ್ವಾರ, ಪ್ರಯಾಗ, ಕಾಶಿ, ಕಲ್ಕತ್ತೆಯಕಡೆಗೆ ಹೋಗಬೇಕು. ಜನರಿಗೆ ಎಂತಹ ವಿಶ್ವಾಸ ಈ ಅಮರ ನದಿಯನ್ನು ಕಂಡರೆ! ವಂಗದೇಶದಲ್ಲಂತೂ ದೂರದಿಂದ ಗಂಗಾನದಿಗೆ ಮಿಾಯಲು ಬರುವರು. ಕಣ್ಣಿಗೆ ನದಿ ಕಂಡೊಡನೆಯೆ "ಓಮಾ" ಎಂದು ಬಾಷ್ಪವಾರಿಯಿಂದ ಉಚ್ಚರಿಸುವರು. ಮಕ್ಕಳಿಗೆ ತಾಯನ್ನು ಕಂಡಷ್ಟು ಪ್ರೀತಿ ಸಲಿಗೆ ಈ ನದಿಯನ್ನು ಕಂಡರೆ. ಕಲ್ಕತ್ತೆಯ ಸಮಿಾಪದ ನದಿ ಶುಭ್ರತುಷಾರ ಪೋಷಿತ ಜಲವಲ್ಲ. ಮಳೆಗಾಲದಲ್ಲಿ ಚರಂಡಿಯಲ್ಲಿ ಹರಿಯುವ ಮಣ್ಣಿನಿಂದ

ಕೂಡಿದ ನೀರಿನಂತೆ ಇರುವುದು. ಆದರೂ ಅದರಲ್ಲಿ ಎಂತಹ ಭಕ್ತಿ ವಿಶ್ವಾಸದಿಂದ ಮಿಾಯುವರು. ಆದರೆ ಹರಿದ್ವಾರದಲ್ಲಿ ಹರಿವ ಗಂಗೆ ಶುಭ್ರವಾಗಿದೆ, ಸ್ವಚ್ಛ ವಾಗಿದೆ, ಭವಜೀವಿಗಳ ಅಘಮೋಚನೆಗೆ ಆಗತಾನೆ ಇಳಿದುಬಂದಿದೆ. ಅಲ್ಲಿ ಮಿಂದುವರಿಗೆ ಪಾಪಹೋಗುವುದೊ, ಬಿಡುವುದೊ, ನಾನರಿಯೆ. ಆದರೆ ಅದರಲ್ಲಿ ಮಿಂದಾದಮೇಲೆ ತಾತ್ಕಾಲಿಕವಾಗಿಯಾದರೂ ಹೊಸಮನುಷ್ಯರಾಗುವೆವೆಂದು ಭಾಸವಾಗುವುದು. ಹರಿದ್ವಾರ ಹಿಮಾಲಯದ ತಪ್ಪಲಲ್ಲಿ ಇದ್ದರೂ ಶೆಖೆ ಬಹಳ. ನಾನು ಹೋದಾಗ ಬೇಸಗೆಯಕಾಲ ಆಗಲೆ ಪ್ರಾರಂಭವಾಗಿ ಮಧ್ಯಕ್ಕೆ ಮುಟ್ಟಿತ್ತು. ಬಿಸಿಲಿನ ತಾಪ ನೂರೆಂಟು ನೂರ ಹತ್ತರವರೆಗೆ ಇರುತ್ತಿತ್ತು. ಆ ಉರಿಬಿಸಿಲಿನಲ್ಲಿ ಈ ನದಿಯಲ್ಲಿ ಇಳಿದೊಡನೆಯೆ ಉರಿಬಿಸಿಲು ಮಾಯವಾಗು ವುದು. ಅಷ್ಟು ತಂಪಾಗಿದೆ ಅಲ್ಲಿಯ ನೀರು. ಅಷ್ಟು ಬೇಸಿಗೆಯ ತಾಪವನ್ನು ತಗ್ಗಿಸುವುದು. ಭವ ತಾಪವನ್ನು ತಗ್ಗಿಸುವುದು ಅನುಮಾನಾಸ್ಪದವಾಗಿರ ಬಹುದು; ಅಥವಾ ನಮ್ಮ ವಿಚಾರದ ರೈಲ್ವೆ ಕಂಬಿಯ ಮೇಲೆ ಓಡುವ ಮನಸ್ಸಿಗೆ ನಿಲುಕದೆ ಇರಬಹುದು.

ನೀರಿನಲ್ಲೆಲ್ಲಾ ದೊಡ್ಡದೊಡ್ಡ ಮಿಾನುಗಳಿವೆ. ಸುತ್ತಲೂ ಬರುವುವು ಸ್ನಾನಕ್ಕೆ ನೀರಿನಲ್ಲಿ ಇಳಿದೊಡನೆಯೆ. ನಿರ್ಭಯದಿಂದ ಸುತ್ತಮುತ್ತಲೂ ತಾರಾಡುವುವು. ಅಲ್ಲಿ ಯಾರೂ ಮಿಾನನ್ನು ಹಿಡಿಯಬಾರದೆಂದು ಕಟ್ಟಾಜ್ಞೆ ಯಾಗಿದೆ. ಜನರಿಗೆ ಭಗವಂತನ ಪ್ರಥಮ ಅವತಾರದ ಮೇಲೆ ಇರುವ ಭಕ್ತಿಯಿಂದ ಇರಬಹುದು! ಅಲ್ಲಿ ಜನ ಸ್ನಾನಪಾದಮೇಲೆ ನೀರಿನಲ್ಲಿ ಪುರಿ ಕಡಲೆ ಅಥವಾ ಇನ್ನೇನನ್ನಾದರೂ ಎರಚಿದರೆ ತಕ್ಷಣ ಬಂದು ನುಂಗಿ ಹೋಗುವುವು. ನಿರ್ಭಯ ದಿಂದ ಆ ಸಾಧುಪ್ರಾಣಿಗಳು ಚಲಿಸುವುದನ್ನು ನೋಡುವುದೊಂದು ಆನಂದ. ಮನುಷ್ಯನು ಬೀಸುವ ಗಾಳದ ಸವಿಯನ್ನು ಇನ್ನೂ ಈ ಮೀನುಗಳು ಅರಿಯವು!

ಹರಿದ್ವಾರದಲ್ಲೇ ಗಂಗಾನದಿಯ ನೀರಿನ ಬಹುಭಾಗವನ್ನು ಅಡ್ಡಕಟ್ಟಿ ಕಾಲುವೆಗೆ ತಿರುಗಿಸಿಬಿಡುವರು. ಅದು ಸಾವಿರಾರು ಮೈಲಿ ಹರಿದು ಲಕ್ಷಾಂತರ ಎಕರೆಗೆ ಜೀವದಾನಮಾಡಿ ಕೋಟ್ಯಂತರ ಜನರ ಕೂಳಿಗೆ ಅನುಕೂಲವಾಗಿದೆ.

ಹಿಂದೆ ಭಗೀರಥ ಗಂಗಾನದಿಯನ್ನು ತನ್ನ ಗತಿಸಿದ ಪಿತೃಗಳಿಗೆ ಸದ್ಗತಿ ತೋರಿಸು ವುದಕ್ಕೆ ತಂದನೆಂದು ಹೇಳುವರು. ಆದರೆ ಆಧುನಿಕ ಭಗೀರಥರಿಗೆ ಪರಲೋಕದಲ್ಲಿ ನರಳುತ್ತಿರುವ ಪಿತೃಗಳ ಆರ್ತನಾದ ಅಷ್ಟು ಕೇಳುವುದಿಲ್ಲ. ಕಣ್ಣೆದುರಿಗಿರುವ ಜನರ ಬಡತನ, ಅವರ ಹೊಟ್ಟೆಹಸಿವಿನಿಂದ ಏಳುವ ಕ್ರಂದನ ಹೆಚ್ಚು ಜರೂರಾಗಿದೆ. ಅದಕ್ಕೇ ಕಾಲುವೆ ಅಗೆದು ಗಂಗಾತಾಯಿಯನ್ನು ಭೋಗ ಭೂಮಿಯ ಕಡೆ ತಿರುಗಿಸಿರುವರು. ತಾಯಿ ಗಂಗೆ ಯೋಗ ಭೋಗಗಳೆರಡನ್ನೂ ಕೊಡುವಳು. ಅವಳ ಒಂದು ಕೈಯಲ್ಲಿ ಭೋಗದ ಪಾತ್ರೆಯಿದೆ. ಮತ್ತೊಂದು ಕೈಯಲ್ಲಿ ವೈರಾಗ್ಯ ಸೂಚಿಸುವ ಮುದ್ರೆ ಇದೆ. ಪ್ರಪಂಚವನ್ನು ಅನುಭವಿಸಬೇಕೆಂದು ಮಕ್ಕಳು ಆಸೆಪಟ್ಟರೆ ಒಂದೇ ಸಲಿ ಬೇಡ ಅನ್ನುವಳಲ್ಲ ತಾಯಿ. ಸ್ವಲ್ಪ ರುಚಿ ನೋಡಲಿ ಜನ ಪ್ರಪಂಚದ ಸುಖವನ್ನು ಎಂದು, ಕೇಳಿದುದನ್ನು ಕೊಡುವಳು. ಕರೆದೆಡೆ ನಾಲೆಯಲ್ಲಿ ಹಿಂದೆ ಹಿಂದೆ ಹೋಗುವಳು. ಕೆಲವು ವೇಳೆ ಮೇಲಿಂದ ಕೆಳಗೆ ಕಬ್ಬಿಣದ ಕೊಳವಿಯೊಳಗಿನಿಂದ ಧುಮುಕಿ ವಿದ್ಯುತ್ತನ್ನು ಕೊಡಹಿ ಏಳುವಳು. ಜನ ಅದರಿಂದ ಹತ್ತಿಸುವ ದೀಪ, ಕಾರ್ಖಾನೆಯಲ್ಲಿ ಮಾಡುವ ಕೆಲಸ, ಕೇಳುವ ರೇಡಿಯೋ ಯಂತ್ರ ಮುಂತಾದ ಆಟದ ಸಾಮಾನನ್ನು ನೋಡುತ್ತ ಸ್ವಲ್ಪ ಅನುಭವಿಸಲಿ ಮಕ್ಕಳು ಎಂದು ಮುಂದೆ ಸಾಗುವಳು. ಆದರೆ ಆ ಸುಖವನ್ನು ಅನುಭವಿಸಿ, ಬೇಸತ್ತು, ಸಾಕು ಈ ಎರಡು ದಿನದ ಬಾಳುವೆ. ಶಾಂತಿ ನೀಡು, ಸದ್ಗತಿ ನೀಡು ಎಂದು ಬೇಡಿದಾಗ, ತೀರದಲ್ಲಿ ತನ್ನ ವಕ್ಷದ ಮೇಲೆ ಮಕ್ಕಳನ್ನು ಕುಳ್ಳಿರಿಸಿಕೊಂಡು ಜ್ಞಾನ ಭಕ್ತಿ ವೈರಾಗ್ಯವನ್ನು ಹೇಳಿ ಕೊಡುವಳು. ಆ ನದೀತೀರದಲ್ಲೆ ಹಿಂದಿನ ನಮ್ಮ ಋಷಿಗಳು ತಪಸ್ಸು ಮಾಡಿದ್ದು, ಆ ನದೀತೀರದಲ್ಲೇ ನಮ್ಮ ಪವಿತ್ರ ಕ್ಷೇತ್ರಗಳಿದ್ದುದು. ಇಡೀ ಹಿಂದೂ ಸಂಸ್ಕೃತಿಯ ಶಿಶುಗಳು ಗಂಗಾನದಿಯ ಸ್ತನ್ಯಪಾನದಿಂದ ಬೆಳೆದ ಮಕ್ಕಳು. ಬ್ರಹ್ಮಕುಂಡದಲ್ಲಿ ಗಂಗಾಮಾತೆಯ ಪಾರಮಾರ್ಥಿಕ ಪದರ್ಶನ, ಗಂಗಾನದಿಯ ನಾಲೆಯಲ್ಲಿ ಅವಳ ಐಹಿಕ ಪದರ್ಶನ.

ಹರಿದ್ವಾರದಲ್ಲಿ ಮತ್ತೊಂದು ದೃಶ್ಯವೇ ದಕ್ಷನ ಯಜ್ಞಕುಂಡ. ಹಿಂದೆ ದಕ್ಷ ಯಜ್ಞವನ್ನು ಮಾಡಿದ ಸ್ಥಳ ಅದು. ದಕ್ಷಮಹಾರಾಜ ಮಹಾಯಜ್ಞ

ನನ್ನು ಮಾಡುವನು. ದೊಡ್ಡ ದೊಡ್ಡ ರಾಜರು ಮಹಾರಾಜರನ್ನೆಲ್ಲ ಯಾಗಕ್ಕೆ ಆಹ್ವಾನಿಸುವನು. ಆದರೆ ಹೆತ್ತ ತನ್ನ ಮಗಳು ದಾಕ್ಷಾಯಣಿ, ಅಳಿಯ ಶಿವ ಇವರಿಗೆ ಆಮಂತ್ರಣ ಕಳುಹಿಸುವುದಿಲ್ಲ. ದಾಕ್ಷಾಯಣಿಗೆ ಈ ಸಮಾಚಾರ ತಿಳಿದು, ತಂದೆ ಎಲ್ಲೊ ಅವಸರದಲ್ಲಿ ಮರೆತಿರಬಹುದೆಂದು, ಶಿವ ಹೋಗಬೇಡ ವೆಂದು ಎಷ್ಟು ಹೇಳಿದರೂ ಕೇಳದೆ ತಂದೆಯ ಮನೆಗೆ ಬರುವಳು. ಹೆಣ್ಣಿಗೆ ತೌರುಮನೆಯ ಮೇಲಿರುವ ವಾಂಛಲ್ಯ ಇದು. ದೇವರಾಗಲಿ, ಮನುಷ್ಯ ರಾಗಲಿ, ದಾನವರಾಗಲಿ, ಈ ಮಮತೆ ಮರೆಯಲಾಗದು. ಆದರೆ ದಕ್ಷ ಮಗಳನ್ನು ನಿರ್ಲಕ್ಷ್ಯದಿಂದ ನೋಡುವನು. ಮಗಳು ಬಂದದ್ದು ತನಗೆ ಅವಮಾನವಾಯಿತೆಂದು ಭಾವಿಸುವನು. ರತ್ನ ಕಿರೀಟಗಳನ್ನು ಧರಿಸಿ ಮೆರಯು ತ್ತಿರುವ ಆ ಸಭಿಕರೊಡ್ಡೋಲಗದಲ್ಲಿ ಇವಳೇ ತನ್ನ ಮಗಳು, ಹಿಮಾಲಯದಲ್ಲಿ ಮೈಗೆಲ್ಲ ಬೂದಿಬಳಿದುಕೊಂಡು ಅಲೆದಾಡುವ ಶಿವ ಬೈರಾಗಿಯನ್ನು ಮದುವೆ ಯಾದವಳು ಎಂದು ಹೇಳಿಕೊಳ್ಳುವುದಕ್ಕೆ ಇವನಿಗೆ ನಾಚಿಕೆ. ಬಾಹ್ಯ ಪ್ರಪಂಚದ ವೈಭವಕ್ಕೆ ಮನಸೋತು ಮಗಳಮೇಲಿನ ವಾಂಛಲ್ಯವನ್ನೂ ಬಲಿ ಕೊಡುವನು. ಅಳಿಯನನ್ನು ಮನಸಾರ ಜರಿಯುವನು. ಆಗಲೇ ಇದನ್ನು ಕೇಳಲಾರದ ದಾಕ್ಷಾಯಣಿ ಅದೇ ಯಜ್ಞಕುಂಡದಲ್ಲಿ ಬಿದ್ದು ನಾಶವಾಗುವಳು, ತಕ್ಷಣ ಶಿವನ ಗಣಗಳು ಅಲ್ಲಿಂದ ಉದ್ಭವಿಸಿ ದಕ್ಷನನ್ನು ನಾಶಮಾಡುವರು. ಈಗಲೂ ಅಲ್ಲಿ ಒಂದು ಯಜ್ಞಕುಂಡವಿದೆ. ದಾಕ್ಷಾಯಣಿ ಬಿದ್ದ ಸ್ಥಳ ಇದು ಎಂದು ತೋರುವರು. ಕಾಳಿದಾಸನ "ಕುಮಾರಸಂಭವ" ದಲ್ಲಿ ಬರುವ ಈ ಘಟನೆ ಕಣ್ಣಿಗೆ ಕಟ್ಟಿದಂತೆ ಆಗುವುದು ಇಲ್ಲಿ.

ಅದರ ಪಕ್ಕದಲ್ಲೇ ಕಿರಿಯ ಶಿವದೇಗುಲವಿದೆ. ಅದೇ ಶಿವನು ಸುಪ್ರೀತ ನಾದ ಸ್ಥಳ ಎನ್ನುವರು. ಶಿವ ಕೇವಲ ತನ್ನ ವೈರಿಗಳನ್ನು ನಾಶಮಾಡಿದ್ದರೆ ಅವನ ಮೂರನೆ ಉರಿಗಣ್ಣು ಮಾತ್ರ ನಮಗೆ ಅರಿವಾಗುತ್ತಿತ್ತು. ಆದರೆ ಅವನು ಉರಿಗಣ್ಣ ಮಾತ್ರವಲ್ಲ, ನಂಜುಂಡ. ಸಮುದ್ರಮಥನದ ಕಾಲದಲ್ಲಿ ಮೇಲೆದ್ದ ಹಾಲಾಹಲವೆಂಬ ವಿಷವನ್ನು ಜನರ ಸಂರಕ್ಷಣೆಗಾಗಿ ತಾನುಂಡವನು ನಂಜುಂಡ. ದಕ್ಷನ ಕಡೆಯವರು ದುಃಖದಿಂದ ಶಿವನನ್ನು ಪ್ರಾರ್ಥಿಸಿದಾಗ ಶಿವ ದಕ್ಷನಿಗೆ

ಸದ್ಗತಿ ದೊರಕಲೆಂದು ಆಶೀರ್ವದಿಸಿದ ಸ್ಥಳ ಅದು. ತಪ್ಪುಮಾಡುವುದು ಮಕ್ಕಳ ಸ್ವಭಾವ. ಅದರಂತೆಯೇ ಮಾಡಿದ ತಪ್ಪಿಗೆ ಶಿಕ್ಷೆ ಕೊಟ್ಟಾದ ಮೇಲೆ ಅವರಿಗೆ ಮರುಗಿ ಸದ್ವ್ಯಕ್ತಿಗಳಾಗುವುದಕ್ಕೆ ಅವಕಾಶನೀಡುವುದೂ ಕೂಡ ಜಗದ ತಾಯಿ ತಂದೆಯಾದ ದೇವರ ಸ್ವಭಾವ. ಭಗವಂತನ ದಯೆಯನ್ನು, ಅಪಾರ ಕರುಣೆಯನ್ನು, ಮನಸ್ಸಿಗೆ ಮುಟ್ಟುವಂತೆ ಮಾಡುವ ದೃಶ್ಯ ಈ ಪುಟ್ಟಗುಡಿ.

ಸಂಜೆ, ಬ್ರಹ್ಮಕುಂಡದಲ್ಲಿ ಆಗುವ ಮಂಗಳಾರತಿ ನೋಡುವುದಕ್ಕೆಹೋದೆ. ಗಂಗಾದೇವಿಗೆ ಮಂತ್ರಪೂರ್ವಕ ಶಂಖ ಜಾಗಟೆಗಳೊಡನೆ ವೈಭವದಿಂದ ಪ್ರತಿದಿನ ಸಂಜೆ ಮಂಗಳಾರತಿ ಮಾಡುವರು. ಸಾವಿರಾರು ಜನ ಅಲ್ಲಿ ಆ ಸಮಯದಲ್ಲಿ ನೆರೆಯುವರು. ಎಷ್ಟು ಭಕ್ತಿಯಿಂದ ಜನರು ಅದನ್ನು ಅವಲೋಕಿಸುವರು. ‘ ಗಂಗಾಮಾಯಿ ’ ಎಂದು ಕಂಬನಿದುಂಬಿ ಆ ತಾಯಿ ಇವರೆದುರಿಗೆ ನಿಂತಿರುವಳೋ ಎನ್ನುವಂತೆ ಪ್ರಾರ್ಥಿಸುವರು. ಎಂತಹ ಸಂದೇಹವಾದಿ, ಜಡವಾದಿಗೂ, ಎದೆಗೆ ಮುಟ್ಟುವ ದೃಶ್ಯ ಇದು. ಮಕ್ಕಳು ದೂರವಿರುವ, ಇನ್ನೂ ಬಾರದಿರುವ, ತಾಯಿತಂದೆಗೆ ಮರುಗುವುದನ್ನು ನೋಡಿದಾಗ ಎಷ್ಟು ನಮ್ಮ ಎದೆಗೆ ತಟ್ಟುವುದೋ ಅದಕ್ಕಿಂತ ಹೆಚ್ಚು ಭಾವಪರಿವಶನಾಗುವನು ಅವನು ಈ ದೃಶ್ಯವನ್ನು ನೋಡಿದಾಗ. ಮಂಗಳಾರತಿಯಾದಮೇಲೆ ಎಲೆಯಲ್ಲಿ ಮಾಡಿದ ದೋಣಿಯಲ್ಲಿ ಹೂವನ್ನು ತುಂಬಿ ಅದರಮೇಲೆ ಕರ್ಪೂರ ಹತ್ತಿಸಿ ಇಟ್ಟು ಅದನ್ನು ಗಂಗಾ ನದಿಯ ಮೇಲೆ ತೇಲಿ ಬಿಡುವರು. ಹಲವು ಕಿರಿಯ ಹೂವಿನ ದೋಣಿಗಳು ಮಿನುಗವ ಕರ್ಪೂರದಾರತಿಯನ್ನು ಹೊತ್ತುಕೊಂಡು ನದಿಯ ವಕ್ಷದಮೇಲೆ ಕತ್ತಲಲ್ಲಿ ತೇಲುತ್ತಿರುತ್ತವೆ. ಅವು ಕೆಲವು ದೂರ ಹೋಗುವುವು. ಅಷ್ಟು ಹೊತ್ತಿಗೆ ಇತರ ದೋಣಿಗೆ ತಗುಲಿ ಮುಳುಗುವುವು. ದೀಪ ಗಾಳಿಗೆ ಸಿಕ್ಕಿ ನಂದಿಹೋಗುವುದು. ಹಲವರು ತಮ್ಮ ಜೀವನದ ಭವಿಷ್ಯವನ್ನು ಇದರ ಮೇಲೆ ಊಹಿಸುವರು. ಯಾವ ದೋಣಿ ದೂರ ಹೋಗುವುದೋ ಅವರು ಹೆಚ್ಚು ಕಾಲ ಬದುಕುವಂತೆ ನಿರ್ಧರಿಸುವರು. ಘರ್ಷಣೆಯಾಗದೆ ಮುಂದೆ ತೇಲಿ ಹೋದರೆ, ಜೀವನ ಸುಸೂತ್ರವಾಗಿ ಸಾಗುವುದೆಂದು ಭಾವಿಸುವರು. ಆದರೆ ಎಷ್ಟುಕಾಲ ಉರಿದಾವು ಅರ್ಧಾಣೆ ಕಾಲಾಣೆ ಕರ್ಪೂರ ಹೊತ್ತ ಈ ದೋಣಿಗಳು! ಎಷ್ಟುದೂರ ತೇಲಬಲ್ಲವು ಕಿರಿ

ಅಲೆಗಳ ರಭಸ ಮತ್ತು ದೋಣಿಗಳಿಂದ ತುಂಬಿರುವ ಆ ಗಂಗಾಜಲಧಿಯಲ್ಲಿ! ಭವಜೀವಿಗಳು ಪ್ರಪಂಚದ ಆಶೆನಿರಾಶೆಗಳಲ್ಲಿ ಬೆಂದುನೊಂದು ಜಗನ್ಮಾತೆಗೆ ತಮ್ಮ ವೇದನೆಯನ್ನು ವಿವರಿಸುವ ಪತ್ರಗಳನ್ನು ಹೊತ್ತು ಸಂಚರಿಸುವಂತೆ ಇದ್ದವು ಆ ತೇಲುವ ಹೂವಿನ ದೋಣಿಗಳ ಸಾಲು.

೨

# ಹೃಷೀಕೇಶ

ಮೂರನೆ ದಿನ ಮೇ ೮ ನೇ ತಾರೀಖು ಹೃಷೀಕೇಶವನ್ನು ನೋಡಲು ಹೋದೆವು. ಹಿಂದೆ ಅದು ದಟ್ಟಕಾನನ ಪ್ರಾಂತ್ಯವಾಗಿತ್ತು. ಆದರೆ ಆಗ ಪಾಕಿಸ್ಥಾನದಿಂದ ಬಂದ ಹಿಂದೂಗಳನೇಕರು ನೆಲಸಿ ಅದನ್ನು ಒಂದು ಊರನ್ನೇ ಮಾಡಿರುವರು. ಅದು ಸನ್ಯಾಸಿಗಳ ಊರು. ದಾರಿಯಲ್ಲಿ ಎಲ್ಲಿ ನೋಡಿದರೂ ಬಗೆಬಗೆಯ ಸನ್ಯಾಸಿಗಳು ಸಂಚರಿಸುತ್ತಿರುತ್ತಾರೆ. ಹಲವು ಆಶ್ರಮಗಳಿವೆ. ಎಲ್ಲಾ ಸಂಪ್ರದಾಯದವರೂ ಇರುವರು. ಭರತಖಂಡದ ಅನೇಕ ಕಡೆಗಳಿಂದ ಬಂದವರನ್ನು ಇಲ್ಲಿ ನೋಡಬಹುದು. ಇದು ದೊಡ್ಡ ಬಸ್ಸು ನಿಲ್ದಾಣ. ಇಲ್ಲಿಂದಲೆ ಕೇದಾರನಾಥ ಬದರಿನಾಥದ ಕಡೆಗೆ ಹೋಗುವ ಯಾತ್ರಿಕರನ್ನು ಬಸ್ಸು ಕರೆದುಕೊಂಡು ಹೋಗುವುದು. ನಾವು ಮೂರನೆಯದಿನ ಪ್ರಯಾಣ ಬೆಳೆಸಬೇಕಾಗಿದ್ದುದರಿಂದ ದೇವಪ್ರಯಾಗದವರೆಗೆ ಬಸ್ಸಿನ ಟಿಕೀಟನ್ನು ಕೊಂಡೆವು. ಬಸ್ಸಿನಲ್ಲಿ ಎರಡು ಕ್ಲಾಸುಗಳಿವೆ. ಒಂದು ಅಪ್ಪರ್‌ಕ್ಲಾಸ್ ಮತ್ತೊಂದು ಲೋಯರ್‌ಕ್ಲಾಸ್. ಅಪ್ಪರ್‌ಕ್ಲಾಸ್ ಎಂದರೆ ಡ್ರೈವರ್ ಪಕ್ಕದಲ್ಲಿ ಒಬ್ಬ ಮತ್ತು ಅವನ ಹಿಂದೆ ಇರುವ ಸಾಲಿನಲ್ಲಿ ನಾಲ್ಕುಜನ ಕೂಡುವರು. ಇದಕ್ಕೆ ಲೋಯರ್ ಸೀಟಿನ ಸುಮಾರು ಎರಡರಷ್ಟು ಹಣ ಕೊಡಬೇಕು. ಯಾರಿಗೆ ಬಸ್ಸಿನಲ್ಲಿ ಹೋದರೆ ತಲೆ ತಿರುಗುವ ಅಭ್ಯಾಸವಿದೆಯೊ ಅವರು ಅಪ್ಪರ್ ಸೀಟಿನಲ್ಲಿ ಕುಳಿತರೆ ಮೇಲು. ಹಿಂದೆ ಕುಳಿತರೆ ಬಸ್ಸು ಬೆಟ್ಟವನ್ನು ಹತ್ತುವಾಗ ಸುತ್ತಿಕೊಂಡು ಹೋಗುವುದರಿಂದ ವಾಂತಿಯಾಗಿ ಆಯಾಸವಾಗು

ವುದು. ಮೊದಲು ಬಸ್ಸಿಗಾಗಿ ಟಿಕೇಟನ್ನು ಕೊಂಡಮೇಲೆ ಹೃಷೀಕೇಶದಲ್ಲಿ ನೋಡ ಬೇಕಾದ ಕೆಲವು ದೃಶ್ಯಗಳಕಡೆ ಹೊರಟೆವು. ಅಲ್ಲಿರುವ ಪ್ರಮುಖ ದೇವ ಮಂದಿರಗಳಲ್ಲಿ ಭರತಮಂದಿರ ಎನ್ನುವುದು ಬಹಳ ಪ್ರಖ್ಯಾತಿ. ದಕ್ಷಿಣದಲ್ಲಿರು ವವರಿಗೆ ರಾಮನ ದೇವಸ್ಥಾನ ನೋಡಿ ರೂಢಿ. ಕೆಲವು ವೇಳೆ ಅವನೊಡನೆ ಇತರ ತಮ್ಮಂದಿರೂ ಇರಬಹುದು. ಆದರೆ ಭರತನಿಗೇ ಪ್ರತ್ಯೇಕ ಮಂದಿರ ಕಟ್ಟಿ ಸಿಲ್ಲ. ಇದೊಂದು ಅಪರೂಪ ದೇವಸ್ಥಾನವಾಗಿ ಕಂಡಿತು ನನಗೆ. ರಾಮಾಯಣ ದಲ್ಲಿ ಬರುವ ಭರತನ ಜೀವನ ನೋಡಿದರೆ, ಅವನ ಶೀಲ ನೋಡಿದರೆ, ಇಲ್ಲಿ ಜನ ಅವನಿಗೊಂದು ದೇವಸ್ಥಾನ ಕಟ್ಟಿಸಿರುವುದು ದೊಡ್ಡದೇನೂ ಅಲ್ಲ ಎನ್ನಿಸಿತು. ಎಂತಹ ಉದಾತ್ತಶೀಲ ಭರತನದು. ಎಂತಹ ಮಮತೆ, ಪ್ರೀತಿ ರಾಮನಮೇಲೆ. ತನ್ನ ಹೆತ್ತತಾಯಿ ಕೈಕೇಯಿ ದಶರಥನಿಂದ ರಾಜ್ಯ ಸಂಪಾದಿಸಿ ಕೈಗೆ ಕೊಟ್ಟಾಗ ಅಸಮಾಧಾನದಿಂದ ಆಕೆಯನ್ನು ಕೊಲೆಮಾಡಲೂ ಸಿದ್ಧನಾದನು. ರಾಮನನ್ನು ಕರೆತರಲು ತಾನೇ ಕಾಡಿಗೆ ಹೋದನು. ಅವನು ಬರದಾಗ ಅವನ ಪಾದುಕೆ ಹೊತ್ತು ತಂದು ಅದನ್ನಿಟ್ಟು ರಾಮ ಬರುವವರೆಗೆ ಅವನ ಪರವಾಗಿ ರಾಜ್ಯಭಾರ ಮಾಡಿ ೧೪ ವರುಷ ಕಳೆದಮೇಲೆ ರಾಮ ಬರುವುದಕ್ಕೆ ಒಂದುದಿನ ತಡವಾದರೂ ತಾನು ಅಗ್ನಿಪ್ರವೇಶಮಾಡುವೆನೆಂದು ಪ್ರತಿಜ್ಞೆಮಾಡಿ ಆ ಪ್ರತಿಜ್ಞೆಯನ್ನು ಪರಿಪಾಲಿಸಿದನು. ಅಣ್ಣನ ಪ್ರೇಮಕ್ಕಾಗಿ ಸರ್ವಸ್ವವನ್ನೂ ಧಾರೆ ಎರೆದ ಮಹಾ ಜೀವಿ. ಕಾಲಕಳೆದಂತೆ ನಮ್ಮ ಸಮಾಜದಲ್ಲಿ ಇಂತಹ ಶೀಲ ಬಹಳ ಅಪರೂಪ ವಾಗುತ್ತಿರುವುದು. ಕವಿ ವಾಲ್ಮೀಕಿ ಭ್ರಾತೃಪ್ರೇಮದ ಶ್ರೇಷ್ಠತಮವ್ಯಕ್ತಿಯನ್ನು ರಾಮಾಯಣದಲ್ಲಿ ಚಿತ್ರಿಸಿ ಹೋಗಿರುವನು. ನಮ್ಮ ಹಿಂದೂ ಸಂಸ್ಕೃತಿಯಲ್ಲಿ ಭ್ರಾತೃಪ್ರೇಮಕ್ಕೆ ಒಂದು ಮೇಲ್ಪಂಕ್ತಿಯಾಗಿರಲಿ ಎಂದು ಜನ ಅವನಿಗೊಂದು ದೇವಾಲಯವನ್ನು ನಿರ್ಮಿಸಿರುವರು. ಅದರಿಂದ ಸ್ವಲ್ಪ ಕೆಳಗಡೆಯೇ ಶತ್ರುಘ್ನನ ಮಂದಿರವಿದೆ. ಆದಾದಮೇಲೆ ಸುಮಾರು ಒಂದೂವರೆ ಮೈಲಿ ಗಂಗಾನದಿ ತೀರದ ಮೇಲೆ ನಡೆದು ಲಕ್ಷ್ಮಣಜೋಲ ಎಂದು ಕರೆಯುವ ಸ್ಥಳಕ್ಕೆ ಹೋದೆವು. ಲಕ್ಷ್ಮಣಜೋಲ ಎಂದರೆ ಲಕ್ಷ್ಮಣ ಕಟ್ಟಿದ ಸೇತುವೆ ಎನ್ನುತ್ತಾರೆ. ರಾಮನ ತಮ್ಮ ಲಕ್ಷ್ಮಣ ಇಲ್ಲಿ ಸಾವಿರಾರು ವರುಷ ತಪಸ್ಸು ಮಾಡಿದ ಎನ್ನುವರು. ಇಂದ್ರಜಿತುವನ್ನು ಕೊಂದಾದಮೇಲೆ ಬ್ರಹ್ಮಹತ್ಯೆಯಿಂದ ಪಾರಾಗಲು ಇಲ್ಲಿ

ತಪಸ್ಸು ಮಾಡಿದನೆಂದೂ ಕೊನೆಗೆ ಪರಮೇಶ್ವರ ಪ್ರತ್ಯಕ್ಷನಾದನೆಂದೂ ಹೇಳುತ್ತಾರೆ. ಅನಂತರ ಲಕ್ಷ್ಮಣ ಗಂಗಾನದಿಯ ಆಚೆಯ ದಡಕ್ಕೆ ಹೋಗುವುದಕ್ಕೆ ತನ್ನ ಕೈಯಿಂದಲೆ ಒಂದು ಸೇತುವೆಯನ್ನು ಕಟ್ಟಿದ ಎನ್ನುವರು. ಆದರೆ ಆ ಸೇತುವೆ ಬಿದ್ದುಹೋಗಿ ಈಗ ಬಲವಾದ ಕಬ್ಬಿಣದ ಸೇತುವೆಯೊಂದು ಇದೆ. ಅಂತೂ ಹೆಸರು ಮಾತ್ರ ಲಕ್ಷ್ಮಣನ ಸೇತುವೆ ಎಂದೇ ಇದೆ. ಅದೇ ಸ್ಥಳದಲ್ಲಿ ಲಕ್ಷ್ಮಣನ ದೇವಸ್ಥಾನವೊಂದು ಇದೆ. ಅವನು ರಾಮನಮೇಲಿಟ್ಟ ಪ್ರೀತಿಯ ನೆನಪಿಗಾಗಿ ಜನರು ಕಟ್ಟಿಸಿದ ಭ್ರಾತೃಪ್ರೇಮದ ಸ್ಮಾರಕ.

ಲಕ್ಷ್ಮಣನ ದೇವಸ್ಥಾನವನ್ನು ನೋಡಿಕೊಂಡು ಸೇತುವೆ ದಾಟಿ ಗಂಗಾನದಿಯ ಎದುರುದಡಕ್ಕೆ ಹೋದರೆ ಅಲ್ಲಿ ಹಲವು ಸಣ್ಣಪುಟ್ಟ ದೇವದೇವಿಯರ ಮಂದಿರಗಳು ಇವೆ. ಇವನ್ನೆಲ್ಲ ನೋಡಿಕೊಂಡು ನಡೆದರೆ ದಟ್ಟವಾದ ಒಂದು ತೋಪು ಸಿಕ್ಕುವುದು. ಅದನ್ನು ಸ್ವರ್ಗಾಶ್ರಮ ಎನ್ನುತ್ತಾರೆ. ಕಾಡಿನಲ್ಲಿ ಕುಟೀರಗಳನ್ನು ಕಟ್ಟಿಕೊಂಡು ಹಲವು ಸಾಧು ಸಂತರು ವಾಸಮಾಡುತ್ತಾರೆ. ಅಂತಹ ಕುಟೀರಗಳು ಸುಮಾರು ಒಂದು ಸಾವಿರವಿದ್ದವು. ಅಲ್ಲಿ ನಾಲ್ಕೈದು ಧರ್ಮಶಾಲೆಗಳಿವೆ. ಮಧ್ಯಾಹ್ನ ಮತ್ತು ಸಾಯಂಕಾಲ ಅವರಿಗೆ ಊಟ ಕೊಡುವರು. ಆ ಸಮಯದಲ್ಲಿ ಸಾಧುಗಳು ಬಂದು ನಿಂತರೆ ಪ್ರತಿಯೊಬ್ಬರಿಗೂ ದಪ್ಪ ದಪ್ಪ ನಾಲ್ಕೈದು ಚಪಾತಿ ಬೇಳೆ ಇವನ್ನು ಕೊಡುವರು. ಕೆಲವುವೇಳೆ ಭಕ್ತರು ಏನಾದರೂ ಸಿಹಿತಿಂಡಿ ಮುಂತಾದುವನ್ನು ಕೊಟ್ಟರೆ ಆ ಸಮಯದಲ್ಲಿ ಅದನ್ನು ಕೊಡುವರು. ನಿಶ್ಚಿಂತೆಯಿಂದ ಯಾವ ಕೆಲಸವನ್ನೂ ಮಾಡದೆ ಊಟದ ಸಮಯದಲ್ಲಿ ಅಲ್ಲಿಗೆ ಹೋದರೆ ಊಟ ಸಿಕ್ಕಿಬಿಡುವುದು. ಹಲವು ಜನ ಸಾಧುಗಳಿರುವರು. ಉಳಿದ ಕಾಲವನ್ನು ತಮಗೆ ತೋಚಿದ ರೀತಿಯಲ್ಲಿ ಸಾಧ್ಯವಾದಷ್ಟು ಧ್ಯಾನ ಅಧ್ಯಯನದಲ್ಲಿ ಕಳೆಯುವರು. ಅನೇಕ ಜನ ಆಧುನಿಕರು ಇದನ್ನು ಮೆಚ್ಚದಿರಬಹುದು. ಸಾವಿರಾರು ಜನರಿಗೆ ಬಿಟ್ಟಿ ಊಟಕೊಟ್ಟು, ಶುದ್ಧ ಸೋಮಾರಿಗಳಿಗೆ ಪ್ರೋತ್ಸಾಹಕೊಡುವುದರಿಂದ ಪ್ರಯೋಜನವೇನು ಎಂದು ಕೇಳುವರು. ಅವರಿಗೆ ಪ್ರಯೋಜನ ಎಂಬ ಪದಕ್ಕೆ ಒಂದೇ ಅರ್ಥವಿರುವುದು. ತಮಗೆ ಯಾವುದು ಪ್ರಯೋಜನವೋ ಅದೇ ಎಲ್ಲರಿಗೂ ಪ್ರಯೋಜನವಾಗಿರಬೇಕು ಎನ್ನುವುದು. ಪ್ರಪಂಚದ ಆರ್ಥಿಕ ಉತ್ಪನ್ನಕ್ಕೆ ಅವರೇನು ಸಹಾಯ

ಮಾಡುತ್ತಿರುವರು, ಅವರಿಂದ ದೇಶಕ್ಕೆ ಏನು ಪ್ರಯೋಜನ ಎಂದು ಕೇಳುವರು. ಇದನ್ನು ಕೇಳಿದಾಗ ಸ್ವಾಮಿ ವಿವೇಕಾನಂದರು ಹೇಳಿದ ಒಂದು ಸಣ್ಣ ಕಥೆ ನೆನಪಿಗೆ ಬರುವುದು. ಒಬ್ಬ ಖಗೋಳ ಶಾಸ್ತ್ರಜ್ಞ ಟೆಲಿಸ್ಕೋಪಿನ ಮೂಲಕ ಆಕಾಶವನ್ನು ನೋಡುತ್ತಿದ್ದ. ಆಗ ಸಣ್ಣದೊಂದು ಮಗು ಅವನ ಹತ್ತಿರ ಬಂದು ನಿಂತುಕೊಂಡು "ಇದರಿಂದ ಏನು ಪ್ರಯೋಜನ, ಇದರಿಂದ ಮಿಠಾಯಿ ಸಿಕ್ಕುವುದೆ?" ಎಂದು ಪ್ರಶ್ನಿಸಿತು. ಆಗ ಖಗೋಳಶಾಸ್ತ್ರಜ್ಞ ಮಗುವಿಗೆ "ನಿನಗೆ ಮಿಠಾಯಿ ಮೇಲೆ ಪ್ರಾಣ. ಯಾವುದು ಮಿಠಾಯಿ ಕೊಡುವುದೊ ಅದೊಂದೆ ಯೋಗ್ಯವಾದ ವಸ್ತು ನಿನಗೆ ಪ್ರಪಂಚದಲ್ಲಿ. ಆದರೆ ನನಗೆ ದೂರ ದೂರದ ತಾರೆ ನಿಹಾರಿಕೆಗಳನ್ನು ತಿಳಿಯುವುದರಲ್ಲಿ ಆಸೆ" ಎಂದನು. ಹಾಗೆಯ ಹೊಟ್ಟೆಗೆ ಬಟ್ಟೆಗೆ ಯಾರು ಸಹಾಯ ಮಾಡುವರೊ ಅವರು ಮಾತ್ರ ಪ್ರಪಂಚದಲ್ಲಿ ಮುಖ್ಯ, ಇತರರು ಗೌಣ ಎಂದು ಅಲ್ಲಗಳೆಯುವೆವು. ಅನೇಕ ಜನ ಶಾಲೆ ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿಗಳಿಗೆ ಸಾವಿರಾರು ವಿದ್ಯಾರ್ಥಿ ವೇತನ ಕೊಡುವರು. ಅವರು ಓದಿ ಆದಮೇಲೆ ಲೌಕಿಕ ಕೆಲಸದಲ್ಲಿ ನಿರತರಾಗಿ ತಮ್ಮ ಹೆಂಡತಿ ಮಕ್ಕಳು ಇವರಲ್ಲಿ ಮರೆಯುವರು. ಇದಕ್ಕೇ ದೇಶದಲ್ಲಿ ಅಷ್ಟೊಂದು ಅವಕಾಶವಿದ್ದರೆ ಅದಕ್ಕಿಂತ ಸ್ವಲ್ಪ ಕಡಿಮೆ ಅವಕಾಶವನ್ನಾದರೂ ಭಗವಂತನ ಚಿಂತನೆಯಲ್ಲಿ ಕಾಲಕಳೆಯ ಬಯಸುತ್ತೇವೆ ಎನ್ನುವವರಿಗೆ ಏತಕ್ಕೆ ಒದಗಿಸಿ ಕೊಡಬಾರದು. ಹಾಗೆ ಕಳೆಯಬಯಸುವವರು ಅಪರೂಪ. ಒಂದುವೇಳೆ ಹಾಗೆ ಬಂದರೆ ಅದರಿಂದ ಅವರಿಗೂ ಮೇಲು, ಅವರಿಗೆ ಊಟ ವಸತಿಯನ್ನು ಒದಗಿಸುವವರಿಗೂ ಶ್ರೇಯಸ್ಸು.

ಕೆಲವು ಆಶ್ರಮಗಳನ್ನು ನೋಡಿಕೊಂಡು ಗಂಗಾನದಿಯ ತೀರದಲ್ಲಿ ಗೀತಾಭವನವೆಂಬ ವಿಶಾಲವಾದ ಮಂದಿರಕ್ಕೆ ಬಂದೆವು. ಬಿರ್ಲಾ ಕಡೆಯವರು ಅದನ್ನು ಕಟ್ಟಿಸುವರು. ಅಲ್ಲಿ ಗೋಡೆಯ ಮೇಲೆಲ್ಲ ಶ್ರೀಕೃಷ್ಣನ ಜೀವನಕ್ಕೆ ಸಂಬಂಧಪಟ್ಟ ಚಿತ್ರಗಳು ಮತ್ತು ಹಿಂದೂಧರ್ಮಕ್ಕೆ ಸಂಬಂಧಪಟ್ಟ ಚಿತ್ರಗಳನ್ನು ಚೆನ್ನಾಗಿ ಬರೆದಿರುವರು. ಗೀತೆಯಮೇಲೆ ಪ್ರಕಟವಾಗುವ ಪುಸ್ತಕವನ್ನು ಅಲ್ಲಿಟ್ಟು ಮಾರುವರು. ಅದರ ಪಕ್ಕದಲ್ಲಿ ಮತ್ತೊಂದು ವಿಶಾಲ ಭವನವಿದೆ. ಅಲ್ಲಿ ಗೀತಾಧ್ಯಯನ ಜಪ ಧ್ಯಾನದಲ್ಲಿ ಕಾಲ ಕಳೆಯುವವರಿಗೆ ಉಚಿತ ಊಟ

ವನ್ನು ಒದಗಿಸುವರು. ದೊಡ್ಡ ಮುದ್ರಣಾಲಯ ಒಂದು ಇದೆ. ಇಲ್ಲಿ ಹಿಂದಿಯಲ್ಲಿ ಧಾರ್ಮಿಕ ಗ್ರಂಥಗಳನ್ನು ಮುದ್ರಿಸಿ ಪ್ರಕಟಿಸುವರು. ಇಲ್ಲಿಂದ ಗಂಗಾನದಿಯ ಅತ್ತ ಕಡೆ ಹೋಗುವುದಕ್ಕೆ ಗೀತಾಭವನದ ಆಡಳಿತಗಾರರು ಉಚಿತ ನೌಕೆಯನ್ನು ಇಟ್ಟಿರುವರು. ಅದರಲ್ಲಿ ಕುಳಿತು ಆಕಡೆಗೆ ಬಂದೆವು. ಅಷ್ಟು ಹೊತ್ತಿಗೆ ಆಗಲೇ ಮಧ್ಯಾಹ್ನ ಹನ್ನೆರಡು ಗಂಟೆಯಾಗಿತ್ತು. ಉರಿ ಬಿಸಿಲು. ನಡೆದು ನಡೆದು ಸಾಕಾಗಿತ್ತು. ಹೃಷೀಕೇಶಕ್ಕೆ ಬಂದು ಗಂಗಾನದಿಯಲ್ಲಿ ಮಿಂದಾಗ ಬೇಗೆಯನ್ನೆಲ್ಲ ಮರೆತೆವು. ಅಲ್ಲೇ ಹತ್ತಿರ ಇದ್ದ ಹೋಟಲಿನಲ್ಲಿ ಊಟಮಾಡಿಕೊಂಡು ಹಿಂತಿರುಗಿದೆವು. ಹಿಂತಿರುವಾಗ ನಮ್ಮ ಸಂಘದ ಒಬ್ಬ ಹಿರಿಯ ಸ್ವಾಮಿಗಳನ್ನು ಸಂದರ್ಶಿಸಿ ಅವರಿಗೆ ನಾನು ನನ್ನ ಕಡೆಯ ಐದುಜನರು ಕೇದಾರ ಬದರಿ ಯಾತ್ರೆಗೆ ನಾಳೆ ಹೊರಡುತ್ತೇವೆ ಎಂದು ಹೇಳಿದೆ. ಅವರು ಅನೇಕವೇಳೆ ಅಲ್ಲಿಗೆ ಹೋಗಿ ಬಂದಿದ್ದರು. ಅವರು ನಮಗೆ ಸಮಯೋಚಿತವಾದ ಸಲಹೆ ಕೊಟ್ಟರು. "ಪ್ರಯಾಣ ಒಂದೆರಡು ದಿನದಲ್ಲಿ ಮುಗಿಯುವುದಲ್ಲ. ಸುಮಾರುಒಂದು ತಿಂಗಳು ಹಿಡಿಯುವುದು. ದಾರಿಯಲ್ಲಿ ಪರಸ್ಪರ ಭಿನ್ನಾಭಿಪ್ರಾಯಕ್ಕೆ, ಘರ್ಷಣೆಗೆ ಎಷ್ಟೋ ಅವಕಾಶವಿರುವುದು. ಹೊರಡುವಾಗ ಪ್ರಾಣ ಸ್ನೇಹಿತರಾಗಿದ್ದರೂ ಯಾತ್ರೆ ಪೂರೈಸಿಕೊಂಡು ಬರುವಾಗ ಅನೇಕಜನ ಬದ್ಧ ವೈರಿಗಳಾಗಿ ಬರುವರು. ಗಂಡ ಹೆಂಡಿರು ಜಗಳಕಾಯುವರು. ತಾಯಿಮಕ್ಕಳು ಜಗಳ ಕಾಯುವರು. ನೀವು ಬಹಳ ಜೋಪಾನವಾಗಿರಿ. ಪ್ರತಿದಿನ ಸಂಜೆ ನಿಮ್ಮ ನಿಮ್ಮಲ್ಲಿ ಏನಾದರೂ ಮನಸ್ತಾಪಗಳಿದ್ದರೆ ಅದನ್ನು ನೀವೇ ಕೂಲಂಕಷವಾಗಿ ಆಲೋಚಿಸಿ ಪರಿಹರಿಸಿಕೊಳ್ಳಿ. ಅದನ್ನು ಹಾಗೆಯೆ ಬಿಡಬೇಡಿ: ಭಿನ್ನಾಭಿಪ್ರಾಯದ ಒಂದು ಕಿಡಿ ಕಾಡುಗಿಚ್ಚಾಗುವುದು, ಹಾಗೇ ಬಿಟ್ಟರೆ"

ಬುದ್ಧಿವಾದವನ್ನು ಕೇಳಿದಾಗ ನನಗೆ ಸ್ವಲ್ಪ ವ್ಯಸನವೇ ಆಯಿತು. ತೀರ್ಥಯಾತ್ರೆಗೆ ಹೋಗುವುದು ಕೋಪ ತಾಪ ಮನಸ್ತಾಪಗಳನ್ನು ಮರೆಯುವುದಕ್ಕೆ. ಹಾಗೆ ಮರೆಯದೆ ಇದನ್ನು ಅಭಿವೃದ್ಧಿ ಮಾಡಿಕೊಳ್ಳುವುದಕ್ಕೆ ಅವಕಾಶ ಒದಗಿಸಿದಂತೆ ಆದರೆ ಗತಿ ಏನು ಎಂದು ಕೊಂಡೆ. ಆದರೆ ಅವರು ಹೇಳಿದ್ದು ಹಾಗೆ ಆಗುತ್ತದೆ ಎಂದಲ್ಲ, ಹಾಗೆ ಆಗುವ ಸಂಭವ ಇದೆ ಎಂದು. ಯಾವಾಗಲೂ ಜೀವನದಲ್ಲಿ ಮುಂದಾಗುವುದನ್ನು ಊಹಿಸಿ ಅದಕ್ಕೆ ಸಿದ್ಧರಾಗಿರುವುದು ಮೇಲು.

ಸಿದ್ಧರಾಗಿದ್ದರೆ ಅದು ಬರುವುದೇ ಇಲ್ಲ. ಎಂದಲ್ಲ. ಆದರೆ ಬಂದಾಗ ಅದರಿಂದ ಆಗುವ ವ್ಯಥೆ ಅಷ್ಟು ಉಲ್ಬಣವಾಗಿರುವುದಿಲ್ಲ, ಒಂದು ಊರಿನಲ್ಲಿ ಕಾಲರ ಇದೆ ಎಂದು ಗೊತ್ತಿದ್ದರೆ ಕಾಲರಾ ಇನ್ಯಾಕ್ಯುಲೇಷನ್ ಮಾಡಿಸಿಕೊಂಡು ಆ ಊರಿಗೆ ಹೋದರೆ ಒಂದು ವೇಳೆ ಖಾಯಿಲೆ ಬಂದರೂ ಅಪಾಯದಿಂದ ಪಾರಾಗಬಹುದು. ಅಷ್ಟು ಹೆಚ್ಚು ನಾವು ವ್ಯಥೆಪಡಬೇಕಾಗುವುದಿಲ್ಲ. ಸ್ವಾಮಿಗಳಿಂದ ಬೀಳ್ಕೊಂಡು ಹರಿದ್ವಾರಕ್ಕೆ ಸಂಜೆ ನಾಲ್ಕು ಗಂಟೆಗೆ ತಲಪಿದೆವು.

೩

# ದೇವಪ್ರಯಾಗ

ನಾಳೆ ಅಂದರೆ ೧೯೫೪ರ ಮೇ ೯ನೇ ತಾರೀಖು ಭಾನುವಾರ ಹರಿದ್ವಾರವನ್ನು ಬಿಡಬೇಕು. ಬಿಡುವುದಕ್ಕೆ ಮುಂಚೆ ನಮಗೆ ಬೇಕಾದ ಚಿಲ್ಲರೆ ಪಲ್ಲರೆ ಸಾಮಾನನ್ನು ಕೊಳ್ಳಲು ಅಂಗಡಿಗೆ ಹೋದೆವು. ದಾರಿಯಲ್ಲಿ ನಡೆಯಬೇಕಾದರೆ ಎಲ್ಲರಿಗೂ ಒಂದೊಂದು ಕೋಲು ಬೇಕು. ಕೋಲಿನ ಅಡಿಗೆ ಅದು ಸವೆಯದಂತೆ ಒಂದು ಕಬ್ಬಿಣದ ಪಟ್ಟಿಯನ್ನು ಸಿಕ್ಕಿಸಿರಬೇಕು. ಕೋಲಿನ ಬೆಲೆ ಬಹಳ ಕಡಿಮೆಯೆಂದೇ ಹೇಳಬಹುದು. ಹತ್ತಿರ ಇರುವ ಬಿದಿರುಮೆಳೆಯಿಂದ ಬರುವುದು. ಒಂದೊಂದು ಕೋಲಿಗೆ ೯ ಆಣೆ. ಅದಕ್ಕೆ ಹಿಡಿ ಹಾಕಿಕೊಡುವುದಕ್ಕೆ ಐದಾಣೆ ಕೊಟ್ಟೆವು. ಆ ಕೋಲು ಸುಮಾರು ನಮ್ಮ ಎತ್ತರದಷ್ಟೇ ಇತ್ತು. ಅಷ್ಟು ಭಾರವೂ ಇರಲಿಲ್ಲ. ಅದೇ ನಮ್ಮ ಪ್ರವಾಸದಲ್ಲೆಲ್ಲ ಒಂದು ತಿಂಗಳು ನಮ್ಮ ಜೀವನದ ಅತಿ ನಿಕಟ ಬಂಧುವಾಗಬೇಕಾಯಿತು. ಅದರ ಸಹಾಯದಿಂದ ಎಷ್ಟು ಕಣಿವೆ ಇಳಿಯಬೇಕೋ, ದಿಣ್ಣೆ ಏರಬೇಕೋ; ನಡೆದು ನಡೆದು ಸಾಕಾದಾಗ ನಮ್ಮ ಎಷ್ಟು ಭಾರ ಅದರ ಮೇಲೆ ಬಿಡಬೇಕೋ ಗೊತ್ತಿಲ್ಲ. ನಾವು ತೆಗೆದುಕೊಂಡು ಹೋದವುಗಳಲ್ಲಿ ಕೆಲವು ಊಟದ ಸಾಮಾನು, ಅದಕ್ಕಿಂತ ಬೆಲೆ ಬಾಳುವ ಬಟ್ಟೆ ಬರೆ, ಮತ್ತು ದುಡ್ಡು ಇದ್ದುವು. ಆದರೆ ಇವೆಲ್ಲಕ್ಕಿಂತ ಹೆಚ್ಚು ನಿಕಟವಾದುದು ಆ ದೊಣ್ಣೆ. ಪ್ರತಿಯೊಬ್ಬರೂ ಒಂದೊಂದು ದೊಣ್ಣೆಯನ್ನು ಆರಿಸಿಕೊಂಡೆವು. ಅನಂತರ ಮಳೆ ಬಂದರೆ ಹಾಸಿಗೆ ನೆನೆಯದಿರಲಿ ಎಂದು ಒಂದು ರಬ್ಬರ್ ಷೀಟನ್ನು ಕೊಂಡೆವು. ಕೆಲವರು ಕಾಲಿಗೆ ಹಾಕುವ ಕ್ಯಾನ್ವಾಸ್

ಷೂಗಳು ಹಳೆಯದಾಗಿದ್ದುದರಿಂದ ಹೊಸದೊಂದು ಜೊತೆಯನ್ನು ತೆಗೆದು ಕೊಂಡು ರಿಸರ್ವ್‌ನಲ್ಲಿ ಇಟ್ಟರು. ಹತ್ತುವಾಗ ಮಾತ್ರ ನಾವು ಷೂಗಳನ್ನು ಹಾಕಿಕೊಂಡರೆ ಒಂದುದಿನ ಎರಡು ಮೂರು ಮೈಲಿ ನಡೆದಮೇಲೆ ಕಾಲು ಕಿತ್ತು ಗಾಯವಾಗುವುದು; ಅನಂತರ ಅದನ್ನು ಹಾಕಿಕೊಳ್ಳಲು ಆಗುವುದಿಲ್ಲ. ಅದು ನಮ್ಮನ್ನು ಹೊತ್ತುಕೊಳ್ಳುವ ಬದಲು ನಾವು ಅದನ್ನು ಹೊತ್ತುಕೊಂಡು ಹೋಗ ಬೇಕಾಗುವುದು. ಅದಕ್ಕೇ ನಾವು ಮೈಸೂರಿನಲ್ಲಿ ಇರುವಾಗ ಸ್ವಲ್ಪ ಸಲ್ಪ ನಡೆದು ಅಭ್ಯಾಸಮಾಡಿಕೊಂಡಿದ್ದೆವು. ಬೆಳಿಗ್ಗೆ ನಡೆಯುವುದಕ್ಕೆ ಮುಂಚೆ ಏನನ್ನಾದರೂ ತಿಂದು ನಡೆಯಿರಿ, ಬರೀ ಹೊಟ್ಟೆಯಲ್ಲಿ ಹೋಗಬೇಡಿ ಎಂದು ನಮಗೆ ಎಚ್ಚರಿಕೆ ಕೊಟ್ಟಿದ್ದರು. ಅವರ ಸಲಹೆಯ ಮೇರೆಗೆ ಕೆಲವು ಬಿಸ್ಕೆಟ್ ಪ್ಯಾಕೆಟ್ ತೆಗೆದುಕೊಂಡೆವು. ದಾರಿಯಲ್ಲಿ ಬಾಯಾರಿಕೆ ಆದರೆ ದಾಹಶಮನ ಕ್ಕೆಂದು ಪೆಪ್ಪರ್‌ಮೆಂಟನ್ನು ಕೊಂಡೆವು. ನಾವೇ ದಾರಿಯ ಪ್ರಯಾಣಕ್ಕೆಂದು ಮೈಸೂರಿನಿಂದಲೇ ಕೆಲವು ಪದಾರ್ಥಗಳನ್ನು ತೆಗೆದುಕೊಂಡು ಬಂದಿದ್ದೆವು, ಅದರಲ್ಲಿ ಹಪ್ಪಳ, ಉಪ್ಪಿನಕಾಯಿ, ಮೆಣಸಿನಪುಡಿ, ಚಟ್ನಿಪುಡಿ, ಮೆಂತ್ಯದ ಹಿಟ್ಟು, ಸ್ವಲ್ಪ ಅವಲಕ್ಕಿ ಇವೆಲ್ಲ ಇದ್ದವು. ಇವೆಲ್ಲಕ್ಕಿಂತ ಹೆಚ್ಚಾಗಿ ಹುಣಸೇ ಹಣ್ಣನ್ನು ತೆಗೆದುಕೊಂಡು ಬಂದಿದ್ದೆವು. ಈ ಊರಿನಕಡೆ ಜನರಿಗೆ ಹುಣಸೇ ಹಣ್ಣು ತಿನ್ನುವ ಅಭ್ಯಾಸವಿಲ್ಲ. ಅಂಗಡಿಯಲ್ಲಿ ದೊರಕುವುದಿಲ್ಲ. ನಮ್ಮ ಜನರಿ ಗಂತೂ ಹುಣಸೇಹಣ್ಣು ಇಲ್ಲದೇ ಇದ್ದರೆ ಅಡಿಗಯೇ ರುಚಿಸುವಂತೆ ಇರಲಿಲ್ಲ. ಅದಕ್ಕಾಗಿ ಏಳೆಂಟು ಜನರಿಗೆ ಒಂದು ತಿಂಗಳಿಗೆ ಬೇಕಾಗುವ ಹುಣಸೇಹಣ್ಣು ಸುಮಾರು ಐದಾರು ವೀಸೆಗಳಿತ್ತು. ಎಲ್ಲರ ಹತ್ತಿರವೂ ಒಂದೊಂದು ಟಾರ್ಚ್ ಲೈಟು ಇತ್ತು. ಅದಕ್ಕೆ ದಾರಿಯಲ್ಲಿ ಬೇಕಾಗುವ ಎಕ್ಸ್ಟ್ರಾ ಸೆಲ್ಲುಗಳನ್ನು ಕೊಂಡೆವು. ಅನಂತರ ಸೇವಾಶ್ರಮಕ್ಕೆ ಬಂದೆವು.

ನಾವು ಇದ್ದದ್ದು ಆರು ಜನ. ಅದರಲ್ಲಿ ಅನೇಕರಿಗೆ ಅಡಿಗೆಮಾಡಿ ಅಭ್ಯಾಸ ವಿರಲಿಲ್ಲ. ನಡೆದು ಸಾಕಾದಾಗ ಅಡಿಗೆಗೆ ಶುರು ಮಾಡಬೇಕಾದರೆ ಅದೊಂದು ದೊಡ್ಡ ಸಾಹಸವೇ ಅಗುವುದು. ಮೊದಲೆ ಬಿಸಿಲಲ್ಲಿ ನಡೆದು ಕಾಲು ಸೋತಿರು ವುದು. ಇದಾದಮೇಲೆ ಒಲೆಯಮುಂದೆ ಕುಳಿತು ಊದುವುದು, ಇದರಿಂದ ಹೊಗೆ ಕಣ್ಣು ಮೂಗು ಬಾಯಿಗೆಲ್ಲ ಹೋದಾಗ, ನಮ್ಮ ಸಹನಶಕ್ತಿ ಕೆಲವುವೇಳೆ

ಮೇರೆ ಮೀರಿಹೋಗಿ, ಹತ್ತಿರಿದ್ದವರ ಮೇಲೆ ಏನಾದರೂ ನೆಪ ತೆಗೆದುಕೊಂಡು ರೇಗುವುದು ರೂಢಿ. ಅಲ್ಲಿ ಅಡಿಗೆ ಮಾಡಬೇಕಾದರೆ ಮೊದಲು ನೀರನ್ನು ತೆಗೆದು ಕೊಂಡು ಬರಬೇಕು. ಕೆಲವು ವೇಳೆ ನೀರು ತರಬೇಕಾದರೆ ಅರ್ಧ ಫರ್ಲಾಂಗ್ ಕೆಳಗೆ ಇಳಿಯಬೇಕು. ಇವೆಲ್ಲಕ್ಕಿಂತ ಕಷ್ಟ ಎಂದರೆ ಅಡಿಗೆ ಮಾಡಿದಮೇಲೆ ಪಾತ್ರೆ ತೊಳೆಯುವುದು. ದಾರಿಯಲ್ಲಿ ಸಿಕ್ಕುವ ನೀರು ಕೈಗೆ ತಾಕಿದರೆ ಕೊರೆದು ಹೋಗುವುದು. ಆ ನೀರಿನಿಂದ ಪಾತ್ರೆ ತೊಳೆಯಬೇಕಾದರೆ ಅದೊಂದು ಹಿಂಸೆಯೇ ಸರಿ. ಪಾತ್ರೆ ತೊಳೆಯುವುದನ್ನು ವಿಳಂಬ ಮಾಡಲಾಗುವುದಿಲ್ಲ. ರಾತ್ರಿಯೇ ಪಾತ್ರೆ ಮುಂತಾದುವನ್ನೆಲ್ಲ ತೊಳೆದು ಗಂಟು ಮೂಟೆ ಕಟ್ಟಿ ಇಟ್ಟರೆ ಮಾತ್ರ ಬೆಳಿಗ್ಗೆ ಸೂರ್ಯೋದಯಕ್ಕೆ ಮುಂಚೆ ಹೋಗಲು ಸಾಧ್ಯ. ಇವನ್ನೆಲ್ಲ ಗಮನಿಸಿ ಒಬ್ಬ ಅಡಿಗೆಯವನನ್ನು ಕರೆದುಕೊಂಡು ಹೋಗಲು ನಿರ್ಧರಿಸಿದೆ. ಆದರೆ ಜೊತೆಗೆ ಬಂದವರು ಬಡಪೆಟ್ಟಿಗೆ ಒಪ್ಪಲೊಲ್ಲರು. "ಆರು ಜನ ಇರುವಾಗ ಒಬ್ಬೊಬ್ಬರು ಒಂದೊಂದು ಕೆಲಸ ಮಾಡಿದರೆ ತೀರಿತು. ಅದಕ್ಕೆ ಅಡಿಗೆಯವನು ಬೇರೆ ಏತಕ್ಕೆ?" ಎಂದು ಆಕ್ಷೇಪಣೆ ಮಾಡಿದರು. ಅವರ ಆಕ್ಷೇಪಣೆಗೆ ಕಿವಿಗೊಡದೆ "ಆರು ಜನ ಇರುವ ಪಾರ್ಟಿಗೆ ಒಬ್ಬ ಅಡಿಗೆಯವನು ಹೆಚ್ಚು ದುಬಾರಿಯಲ್ಲ. ದಾರಿಯಲ್ಲಿ ಅವನೊಬ್ಬನಿದ್ದರೆ ಎಷ್ಟೋ ಕಷ್ಟ ಕಡಮೆಯಾಗು ವುದು. ಅದು ದಾರಿಯಲ್ಲಿ ನಡೆದಮೇಲೆ ವೇದ್ಯವಾಗುವುದು" ಎಂದೆ. ಹರಿದ್ವಾರ ದಲ್ಲಿ ಒಬ್ಬ ಅಡಿಗೆಯವನನ್ನು ಗೊತ್ತುಮಾಡಿದೆವು. ಆತ ತನ್ನ ಜೀವಮಾನದಲ್ಲಿ ಆಗಲೆ ೨೫–೩೦ ವೇಳೆ ಕೇದಾರ ಬದರಿಗೆ ಹೋಗಿ ಬಂದಿರುವನು. ಅವನು ತನಗೆ ಊಟಕೊಟ್ಟು ಅರವತ್ತು ರೂಪಾಯಿ ಕೊಡಬೇಕು ಎಂದ. ಆಗಲಿ ಎಂದೆವು. ಏನೇನು ಅಡಿಗೆ ಮಾಡುವುದಕ್ಕೆ ಬರುತ್ತದೆ ಎಂದಾಗ ಚಪಾತಿ, ಪೂರಿ, ಸಾಗು ಮುಂತಾದುವು ಬರುತ್ತದೆ ಎಂದ. ನಮಗೆ ಅದೆಲ್ಲ ಬೇಕಾಗಿರಲಿಲ್ಲ; ಬರೀ ಅನ್ನ ಬೇಯಿಸಿ ಸಾರೊ ಹುಳಿಯೊ ಮಾಡಿಕೊಟ್ಟರೆ ಸಾಕೆಂದು ಹೇಳಿದೆ. ಹೇಗೆ ಮಾಡುವುದೆಂಬುದನ್ನು ಹೇಳಿಕೊಟ್ಟರೆ ಮಾಡುತ್ತೇನೆ ಎಂದ. ಅಂದು ರಾತ್ರಿಯೇ ನಾವಿರುವಕಡೆ ಮಲಗಲು ಬಂದ, ಜೊತೆಯಲ್ಲಿ ಒಂದು ಗಂಟನ್ನೂ ತಂದ. ಅದೋ ಒಂದೆರಡು ಸೇರು ತೂಕ ಕೂಡ ಇರಲಿಲ್ಲ. ಅದರಲ್ಲಿ ಅತ ಒಂದು ತಿಂಗಳಿಗೆ ಬೇಕಾಗುವಷ್ಟು ಬಟ್ಟೆಬರೆ ಹಾಸಿಗೆ ಎಲ್ಲ ತೆಗೆದುಕೊಂಡು ಬಂದಿರು

ವೆನು ಎಂದ! ಆತ ಜಾತಿಯಲ್ಲಿ ಬ್ರಾಹ್ಮಣ ಎಂದ. ಅವನ ವೇಷ ಭೂಷಣ ಗಳನ್ನು ನೋಡಿದರೆ ಬ್ರಾಹ್ಮಣ್ಯದ ಯಾವ ಚಿಹ್ನೆಯೂ ಕಾಣುತ್ತಿರಲಿಲ್ಲ. ಬಹುಶಃ ಅವನ ಕೋಟಿನ ಒಳಗಡೆ ದೊಡ್ಡದೊಂದು ಜನಿವಾರ ಇದ್ದಿರಬಹುದು! ಅದೂ ಕೂಡ ಗಾಯತ್ರಿಮಂತ್ರ ಕೇಳಿ, ನೀರಿನ ಸಂಗಮಾಡಿ, ಹಲವು ತಿಂಗಳಾಗಿರಬೇಕು. ಆತ ತೊಟ್ಟ ಒಂದು ಅಂಗಿ ಸುಮಾರು ಎಂಟು ಹತ್ತು ತ್ಯಾಪೆಯದು. ಆ ಕೋಟನ್ನು ಮೊದಲು ಯಾವ ಬಟ್ಟೆಯಿಂದ ಮಾಡಿರಬಹುದು ಎಂಬವನ್ನು ಹೇಳುವುದೇ ಜಟಿಲಪ್ರಶ್ನೆಯಾಗಿತ್ತು. ಆತ ಉಟ್ಟ ಪಂಚೆಯೋ, ಫ್ಯಾಕ್ಟರಿಯಲ್ಲಿ ಕೆಲಸಮಾಡುವ ಜನರು ಹಾಕಿಕೊಳ್ಳುವ ಸ್ಪೆಷಲ್ ಉಡುಪನ್ನು ನೆನಪಿಗೆ ತರುತ್ತಿತ್ತು. ಈತ ಹತ್ತಿರ ಬಂದರೆ ಮೂಗನ್ನು ಮುಚ್ಚಿಕೊಳ್ಳ ಬೇಕಾಗಿತ್ತು. ಈತನೇ ನಮ್ಮ ಒಂದುತಿಂಗಳ Friend, Philosopher, guide; ಜೊತೆಗೆ Lord Kitchener ಬೇರೆ, ಅವನಿಗೆ ಪ್ರತಿದಿನ ಸ್ನಾನಮಾಡಿ ಮಡಿಬಟ್ಟೆ ಉಟ್ಟುಕೊಂಡು ಅಡಿಗೆಮಾಡು ಎಂದು ಹೇಳಿದೆವು. ಅದಕ್ಕೆ ಆತ ಒಪ್ಪಿಕೊಂಡ. ಸ್ನಾನವನ್ನೇನೋ ದಾರಿಯಲ್ಲಿ ಸಿಕ್ಕುವ ನೀರಿನಲ್ಲಿ ಆತ ಮಾಡಬಹುದು. ಆದರೆ ಮಡಿಬಟ್ಟೆ ಉಟ್ಟುಕೊಳ್ಳಬೇಕಾದರೆ ಅವನ ಹತ್ತಿರ ಬೇರೆ ಬಟ್ಟೆಯೇ ಇರಲಿಲ್ಲ. ನಾವೆ ಆತನಿಗೆ ಎರಡು ಪಂಚೆ ತೆಗೆದುಕೊಟ್ಟು ಇದನ್ನು ಅಡಿಗೆ ಮಾಡುವಾಗ ಮಾತ್ರ ಉಡಬೇಕು ಎಂದೆವು.

ಒಂಬತ್ತನೇ ತಾರೀಖು ಭಾನುವಾರ ಬೆಳಿಗ್ಗೆ ಅಷ್ಟುಹೊತ್ತಿಗೆ ಎದ್ದೆವು. ಸ್ನಾನಾದಿಗಳನ್ನು ಪೂರೈಸಿಕೊಂಡು ಒಂಬತ್ತು ಗಂಟೆಗೆ ಹೊರಡಲು ಅನು ವಾದೆವು. ಹೊರಡುವುದಕ್ಕೆ ಮುಂಚೆ ಎಲ್ಲರೂ ಆಶ್ರಮದ ದೇವರ ಮನೆಗೆ ಹೋಗಿ ನಮಸ್ಕಾರಮಾಡಿದೆವು. ನಾನಂತೂ ಪ್ರಾರ್ಥಿಸುವಾಗ, ಮಧ್ಯೆ ಮಧ್ಯೆ ಭಿನ್ನಾಭಿಪ್ರಾಯ ಮನಸ್ತಾಪಗಳು ಬರದಂತೆ ಅನುಗ್ರಹಿಸು ಎಂದು ಬೇಡಿಕೊಂಡೆ. ಇತರರೂ ಬಹುಶಃ ಹಾಗೆಯೇ ಪ್ರಾರ್ಥಿಸಿರಬೇಕು. ಏಕೆಂದರೆ, ದಾರಿಯಲ್ಲಿ ನಾವು ಹೋಗುವಾಗ ವ್ಯವಹರಿಸಿದ ರೀತಿಯಿಂದ ಇದನ್ನು ಊಹಿಸಿದೆ. ಹರಿದ್ವಾರದ ಬಸ್ಸಿನ ನಿಲ್ದಾಣಕ್ಕೆ ಹೋಗಿ ಅಲ್ಲಿಂದ ಹೃಷೀಕೇಶಕ್ಕೆ ಹೊರಟೆವು. ಹರಿದ್ವಾರದಿಂದ ಹೃಷೀಕೇಶಕ್ಕೆ ಹದಿನೈದು ಮೈಲಿಗಳು. ರಸ್ತೆ ಚೆನ್ನಾಗಿದೆ. ಟಾರು ಹಾಕಿರುವರು. ಒಂದೇ ಸಮನಾಗಿರುವ ರಸ್ತೆ. ಮಧ್ಯೆ ಸ್ವಲ್ಪ ಹೊತ್ತು

ನಿಂತು ೪೫ ನಿಮಿಷದ ಹೊತ್ತಿಗೆ ನಮ್ಮ ಅಡಿಗೆಯವನೊಂದಿಗೆ ಬಸ್ಸಿನ ನಿಲ್ದಾಣಕ್ಕೆ ತಲುಪಿದೆವು. ನಮ್ಮ ಸಾಮಾನನ್ನು ಹೊರುವುದಕ್ಕೆ ಇನ್ನೂ ಕೂಲಿಯವರನ್ನು ಗೊತ್ತುಮಾಡಿರಲಿಲ್ಲ. ಬಸ್ಸಿನ ಆಫೀಸಿನಲ್ಲಿ ಕುಳಿತಾಗ ಒಬ್ಬ ಕೂಲಿಯ ಏಜೆಂಟ್ ಬಂದು ನಿಮಗೆ ಕೂಲಿಯ ಆವಶ್ಯಕತೆ ಇದೆಯೆ ಎಂದು ಕೇಳಿದ. ನಾವು ಬಸ್ಸು ನಿಂತು ನಡೆಯುವ ಸ್ಥಳದಿಂದ ಕೂಲಿಯನ್ನು ಗೊತ್ತು ಮಾಡಿಕೊಳ್ಳುತ್ತೇವೆ; ಈಗಲೇ ಬೇಡ ಎಂದೆವು, ಅವರು, "ನಮ್ಮ ಕೂಲಿಗಳು ಇಲ್ಲಿಂದಲೇ ನೀವು ಹೊರಡುವ ಬಸ್ಸಿನಲ್ಲಿ ಜೊತೆಯಲ್ಲೇ ತಾವೇ ಚಾರ್ಜು ಕೊಟ್ಟು ಬರುವರು. ದಾರಿಯಲ್ಲಿ ನೀವು ಎರಡು ಮೂರುಕಡೆ ಬಸ್ಸು ಬದಲಾಯಿಸಬೇಕು. ಒಂದು ಕಡೆ ಮೂರು ಮೈಲಿ ನಡೆಯಬೇಕು, ಅದನ್ನೆಲ್ಲ ನಮ್ಮ ಕೂಲಿಗಳೆ ಮಾಡುತ್ತಾರೆ. ಅದಕ್ಕೆ ಹೆಚ್ಚಿಗೆ ಏನೂ ಕೊಡಬೇಕಾಗಿಲ್ಲ" ಎಂದರು. ಏಜೆಂಟಿನ ಮೂಲಕ ಲೈಸೆನ್ಸ್ ಕೂಲಿ ಮಾಡಿಕೊಳ್ಳುವುದು ಮೇಲು. ಆ ಕೂಲಿಗಳ ವಿಳಾಸ ಮನೆ ಮಠ ಎಲ್ಲಾ ಅವನ ಹತ್ತಿರ ಇರುವುದು. ಕೂಲಿಯವನು ಮೋಸಮಾಡಿದರೆ ಅವನಿಗೆ ದೂರು ಕೊಟ್ಟರೆ ಅವನು ಸರಿಪಡಿಸುವನು. ಅದಕ್ಕೆ ನಾವು ಒಪ್ಪಿದೆವು. ಒಂದು ಕಾಂಟ್ರಾಕ್ಟ್ ಸ್ಲಿಪ್ಪಿನಲ್ಲಿ ರುಜುಮಾಡಿ ಅವರಿಗೆ ಅಡ್ವಾನ್ಸ್ ಕೊಟ್ಟೆವು. ಒಬ್ಬೊಬ್ಬ ಕೂಲಿಗೆ ಎಪ್ಪತ್ತು ರೂಪಾಯಿ. ಕೇದಾರನಾಥ ಬದರಿನಾರಾಯಣಕ್ಕೆ ಹೋಗಿ ನಾವು ಬಸ್ಸಿನಲ್ಲಿ ಕೂಡುವವರೆಗೆ ಅವರು ನಮ್ಮ ಸಾಮಾನನ್ನು ಹೊತ್ತುಕೊಂಡು ಬರಬೇಕು. ಹೀಗೆ ಮೂರುಜನ ಕೂಲಿಗಳನ್ನು ಮಾಡಿಕೊಂಡೆವು. ಪ್ರತಿಯೊಬ್ಬರೂ ಒಂದೊಂದು ರೈಲ್ವೆ ಮಣ ಹೊರುವರು. ಅಂದರೆ ನಮ್ಮ ಕಡೆಯ ನಾಲ್ಕುಮಣ ಆಯಿತು. ಅವರಲ್ಲಿ ಹಿರಿಯನ ಹೆಸರು ರಾಮಸಿಂಗ್, ಎರಡನೆಯವನ ಹೆಸರು ಬಹದ್ದೂರ್, ಮೂರನೆಯವನು ಕುಂಡ್ ಎಂದು. ಎಲ್ಲಾ ಹಿಮಾಲಯ ಪ್ರಾಂತದಲ್ಲಿ ವಾಸಿಸುವವರು. ಬಹಳ ಕಷ್ಟಸಹಿಷ್ಣುಗಳು. ಎಲ್ಲರಿಗೂ ಸ್ವಲ್ಪ ಭೂಮಿ ಇದೆ. ಬೆಟ್ಟ ಕಡಿದು ಮಾಡಿದ ಭೂಮಿಯಲ್ಲಿ ಬೆಳೆ ಬೆಳೆಯುವುದು ಬಹಳ ಅಲ್ಪ. ವಿಸ್ತಾರವಾಗುತ್ತಿರುವ ಸಂಸಾರಕ್ಕೆ ತಕ್ಕಂತೆ ಜಮೀನು ವಿಸ್ತಾರವಾಗಿರಲಾರದು. ಹೊಟ್ಟೆಪಾಡಿಗಾಗಿ, ಯಾತ್ರೆಯಕಾಲ ಪ್ರಾರಂಭವಾದೊಡನೆ ಹರಿದ್ವಾರ ಹೃಷೀಕೇಶಗಳಲ್ಲಿ ಕೂಲಿಕೆಲಸಕ್ಕೆ ನೂಕುನುಗ್ಗಾಟ. ನಾವು ಹರಿದ್ವಾರದ ರೈಲ್ವೆ

ಸ್ಟೇಷನ್ನಿಗೆ ಬಂದೊಡನೆಯೆ ಕೆಲವು ಕೂಲಿಗಳು " ನಾವು ಕೇದಾರನಾಥ ಬದರಿಗೆ ಬರುತ್ತೇವೆ, ಕರೆದುಕೊಂಡು ಹೋಗಿ " ಎಂದು ಮುತ್ತಿಕೊಂಡರು. ಆ ಕೂಲಿಗಳಿಂದ ಪಾರಾಗುವುದೇ ಒಂದು ಕಷ್ಟ. ನಮ್ಮ ಕೂಲಿಗಳಲ್ಲಿ ರಾಮಸಿಂಗನೇ ಸ್ವಲ್ಪ ಬುದ್ಧಿವಂತ. ಯಾರಿಗೂ ಓದಲು ಬರೆಯಲು ಬಾರದು. ಕೂಡುವುದು ಕಳೆಯುವುದು ಕೂಡ ಚೆನ್ನಾಗಿ ಬಾರದು. ಆದರೂ ಜನ ಪ್ರಾಮಾಣಿಕರು, ಕಷ್ಟಸಹಿಷ್ಣುಗಳು, ಯಾವ ಹೊತ್ತಿನಲ್ಲಿ ಏನು ಕೆಲಸ ಹೇಳಿದರೆ ತಕ್ಷಣ ಮಾಡುವುದಕ್ಕೆ ಸಿದ್ಧರಾಗಿರುತ್ತಿದ್ದರು. ಸುಮಾರು ಒಂದು ತಿಂಗಳು ಅವರೊಡನೆ ಬೆಳೆದ ಬಾಂಧವ್ಯ ಎಷ್ಟು ನಿಕಟವಾಯಿತೆಂದರೆ, ಕೊನೆಯಲ್ಲಿ ನಾವು ಹೊರಡುವಾಗ ಅವರು ಬಸ್ಸು ಹೋಗುವವರೆಗೆ ನಿಂತು ಹನಿಗಣ್ಣಿನಿಂದ ಹಿಂತಿರುಗಿ ಹೋದರು. ಅವರ ಉಡಿಗೆ ತೊಡಿಗೆ ನಮ್ಮ ಅಡಿಗೆಯವನಿಗಿಂತ ಒಂದು ಕೈ ಕೆಳಗೇ ಇತ್ತು. ಅಶುಚಿ, ಅನೈರ್ಮಲ್ಯದಲ್ಲಂತೂ ಅವಸನ್ನೇ ಮೀರಿಸುತ್ತಿದ್ದರು. ಆದರೆ ಆ ಕೊಳೆಯ ಬಟ್ಟೆ ಕೊಳಕು ದೇಹದೊಳಗಡೆ ಹುದುಗಿರುವ ಹೃದಯ ನಯನಾಜೂಕಿನಿಂದ ಮೆರೆಯುವ ಅನೇಕರಿಗಿಂತ ಸುಸಂಸ್ಕೃತವಾಗಿತ್ತು. ಮೊದಲು ನಾವು ಅವರನ್ನು ಸ್ವಲ್ಪ ಅನುಮಾನ ಅಸಹ್ಯೆಯಿಂದ ಸ್ವೀಕರಿಸಿದರೂ, ದಿನಕಳೆದಂತೆ ಅವರ ಶೀಲ ನಮ್ಮನ್ನು ಮುಗ್ಧರನ್ನಾಗಿ ಮಾಡಿತು.

ಬಸ್ಸು ಹನ್ನೆರಡು ಗಂಟೆಗೆ ಹೊರಟಿತು. ಬಸ್ಸಿನಲ್ಲಿದ್ದವರೆಲ್ಲ " ಜೈ ಕೇದಾರನಾಥ್‌ಕಿ, ಜೈ ಬದರೀವಿಶಾಲ್‌ಕಿ " ಎಂದರು. ನಮ್ಮ ಬಸ್ಸಿನಲ್ಲಿ ಸುಮಾರು ಹದಿನಾರು ಜನರಿದ್ದರು. ಅವರಲ್ಲಿ ನಮ್ಮ ಹಿಂದೆ ಕುಳಿತ ದಂಪತಿಗಳು ದಕ್ಷಿಣ ದೇಶದ ಯಾತ್ರೆಯನ್ನೆಲ್ಲ ಪೂರೈಸಿ ಈ ವೇಳೆ ಬದರೀನಾಥಕ್ಕೆ ಎಂದು ಹೊರಟ ತೆಲುಗರು. ಇಬ್ಬರು ಮೂರು ಜನ ತಮಿಳರಿದ್ದರು. ಕೆಲವರು ಬಂಗಾಳಿ ಮಾತನಾಡುವವರಿದ್ದರು; ಹಿಂದೀ ಮಾತನಾಡುವವರಿದ್ದರು. ಒಬ್ಬರೊ ಇಬ್ಬರೊ ಮಲಯಾಳದವರೂ ಇದ್ದರು. ಒಂದು ಸಂಕ್ಷಿಪ್ತ ಭರತಖಂಡವೇ ಹೊರಟಂತೆ ಇತ್ತು ಬಸ್ಸು. ಅದರಲ್ಲಿ ಎಲ್ಲಾ ದೇಶಭಾಷೆಗಳೂ ಮಿಶ್ರವಾಗಿತ್ತು. ಬಸ್ಸು ಹೊರಟಮೇಲೆ ಇವರು ಮಾತನಾಡುವುದನ್ನು ಕೇಳುವುದೊಂದು ಚೆಂದ. ಒಬ್ಬರು ಕನ್ನಡ, ಒಬ್ಬರು ತೆಲಗು, ಒಬ್ಬರು ತಮಿಳು, ಬಂಗಾಳಿ, ಹಿಂದಿ

ಮಾತನಾಡುವರು. ಮರದಮೇಲೆ ಹಲವು ಹಕ್ಕಿಗಳು ತಮ್ಮತಮ್ಮದೇ ಧ್ವನಿ ಮಾಡುತ್ತಿರುವಂತೆ ಕಂಡಿತು. ಬಸ್ಸು ಹೃಷೀಕೇಶದಿಂದ ಒಂದು ಮೈಲಿ ಹೋದುದೆ ತಡ, ಆಗಲೆ ಒಂದುಕಡೆ ನಿಂತಿತು. ಎಲ್ಲರೂ ಕಾಲರಾ ವ್ಯಾಕ್ಸಿನೇಷ್ ಮಾಡಿಸಿಕೊಂಡಿರಬೇಕು. ಅದರ ಸರ್ಟಿಫಿಕೇಟನ್ನು ತೋರಿಸಿದರೆ ಮುಂದೆ ಹೋಗಲು ಬಿಡುವುದು. ಇಲ್ಲದೇ ಇದ್ದರೆ ಅಲ್ಲೆ ಕಾಲರಾ ವ್ಯಾಕ್ಸಿನೇಷ್ ಮಾಡಿಸಿಕೊಂಡು ಸರ್ಟಿಫಿಕೇಟನ್ನು ತೆಗೆದುಕೊಳ್ಳಬೇಕು. ನಮ್ಮ ಗುಂಪಿನಲ್ಲಿರುವವರೆಲ್ಲ ಅವನ್ನು ತಮ್ಮ ಹತ್ತಿರವೇ ಇಟ್ಟುಕೊಂಡಿದ್ದರು. ಆದರೆ ನನ್ನ ಸರ್ಟಿಫಿಕೇಟ್ ಬಸ್ಸಿನ ಮೇಲಿರುವ ಹಾಸಿಗೆಯಲ್ಲಿ ಸೇರಿಹೋಗಿತ್ತು. ಅದಕ್ಕೆ ಒಂದು ರಬ್ಬರ್ ಶೀಟನ್ನು ಬೇರೆ ಬಿಗಿದಿದ್ದೆ. ಬಸ್ಸಿನಿಂದ ಇಳಿದು ಮೇಲಿರುವ ಒಂದು ರಬ್ಬರ್ ಶೀಟ್ ಕಟ್ಟಿದ್ದ ಹಾಸಿಗೆಯನ್ನು ಕೆಳಗಿಳಿಸಿ ಬಿಚ್ಚಿನೋಡಿದಾಗ ಅದು ಬೇರೆ ಯಾರದೋ ಹಾಸಿಗೆ ಆಗಿತ್ತು. ಹಲವು ಹಾಸಿಗೆಗೆ ರಬ್ಬರ್ ಶೀಟನ್ನು ಕಟ್ಟಿದ್ದರು. ಅದರಲ್ಲಿ ಯಾವುದು ನನ್ನದು ಎಂದು ಕಂಡುಹಿಡಿಯ ಬೇಕಾದರೆ ನಾನೆ ಮೇಲೆ ಹತ್ತಿ ನೋಡಬೇಕಾಗಿತ್ತು. ಈ ರಗಳೆಯೆಲ್ಲ ಏತಕ್ಕೆ ಎಂದು ಇನ್ನೊಂದುಸಲ ವ್ಯಾಕ್ಸಿನೇಷನ್ ಮಾಡಿಸಿಕೊಳ್ಳಲು ನಿಂತೆ. ನಮ್ಮ ಬಸ್ಸಿನ ಹಿಂದೆಯೇ ಇನ್ನೂ ನಾಲ್ಕಾರು ಬಸ್ಸುಗಳು ಬಂದು ನಿಂತವು. ಅವರೆಲ್ಲರೂ ವ್ಯಾಕ್ಸಿನೇಷ್‌ಗೆ ನಿಂತರು. ದೊಡ್ಡದೊಂದು ಕ್ಯೂ ಆಯಿತು, ಸೂಜಿ ಚುಚ್ಚಿಸಿ ಕೊಳ್ಳುವುದಕ್ಕೆ ವ್ಯಾಕ್ಸಿನೇಷ್ ಕೊಡುವವರು ನಿಷ್ಣಾತರಾಗಿಬಿಟ್ಟಿರುವರು ಕಸಬಿನಲ್ಲಿ. ದೊಡ್ಡದೊಂದು ಸಿರಂಜಿನಲ್ಲಿ ವ್ಯಾಕ್ಸಿನೇಷ್ ತುಂಬಿ ಹತ್ತು ಹದಿನೈದು ಜನರಿಗೆ ಎಂಟು ಹತ್ತು ನಿಮಿಷದಲ್ಲಿ ಪೂರೈಸುವರು. ಚುಚ್ಚುವಾಗ ಚುಚ್ಚಿಸಿಕೊಳ್ಳುವರು ಮನುಷ್ಯರೇ ದನಗಳೇ ಎಂಬ ಲಕ್ಷ್ಯ ಕೂಡ ಇರುವುದಿಲ್ಲ. ಕೈ ಒಂದು ಯಂತ್ರವಾಗಿಬಿಟ್ಟಿರುವುದು. ಪಾಪ ಅವರು ತಾನೇ ಮಾಡುವುದೇನು? ಒಂದು ದಿನಕ್ಕೆ ಸುಮಾರು ಏಳುನೂರು ಎಂಟನೂರು ಯಾತ್ರಿಕರಿಗೆ ಒಂದೇ ಸಮನಾಗಿ ಚುಚ್ಚುತ್ತಿದ್ದರೆ ಯಾವ ಮನುಷ್ಯ ತಾನೆ ಯಂತ್ರವಾಗದೆ ಉಳಿದಾನು? ಅಂತೂ ಯಾತ್ರೆಗೆ ಮುಂಚೆ ಸಣ್ಣದೊಂದು ಕಿರುಕುಳವನ್ನು ಸಹಿಸಿಕೊಂಡು ಪುನಃ ಬಸ್ಸು ಹತ್ತಿದೆ. ಈಗ ಡಬ್ಬಲ್ ಕಾಲರಾ ಪ್ರಿವೆನ್ಷನ್ ಆಯಿತು!

ಬಸ್ಸು ಗಂಗಾನದಿಯ ತೀರದಲ್ಲೇ ಹೋಗುವುದು. ಸುಮಾರು ಎರಡು ಮೂರು ಮೈಲಿ ಹೋದ ಮೇಲೆ ಏರು ಪ್ರಾರಂಭವಾಯಿತು. ಬೆಟ್ಟವನ್ನು ಕೊರೆದು ಅಲ್ಲಿ ರಸ್ತೆ ಮಾಡಿರುವರು. ರಸ್ತೆ ವಿಶಾಲವಾಗಿಲ್ಲ. ಸುಮಾರು ಹತ್ತು ಅಡಿ ಅಗಲವಿರಬಹುದು, ಅಷ್ಟೆ. ಅದೋ ಸುತ್ತಿ, ಸುತ್ತಿಕೊಂಡು ಕಂಬಳಿ ಹುಳುವಿನಂತೆ ತೆವಳುತ್ತ ಹೋಗಬೇಕು. ಬಸ್ಸಿನ ಎಡಗಡೆ ಕೈಗೆ ತಾಕುವಂತೆಯೆ ಬೆಟ್ಟ, ಬಲಗಡೆ ಗಂಗಾನದಿ. ಕೆಲವುವೇಳೆ ನದಿ ಬಸ್ಸಿನ ದಾರಿಯ ಸಮೀಪದಲ್ಲೇ ಹರಿಯುತ್ತಿರುವುದು. ಮತ್ತೆ ಕೆಲವುವೇಳೆ ಅದು ಕಣಿವೆಯೊಳಗೆ ದೂರದಲ್ಲಿ ಭೋರ್ಗರೆಯುತ್ತ ಹೋಗುವುದು. ಅದು ಬಸ್ಸಿಗೆ ಒಂದು ಹಿನ್ನೆಲೆಯ ಸಂಗೀತದಂತೆ ಇರುವುದು. ನದಿಯ ವಕ್ಷದಮೇಲಂತೂ ಸೂರಾರು ಪೈನ್ ಹಲಗೆಗಳು ಮೇಲಿನಿಂದ ತೇಲಿಬರುತ್ತಿರುತ್ತವೆ. ಕೆಲವುವೇಳೆ ಬಸ್ಸು ಮೇಲೆ ಮೇಲೆ ಹೋದಾಗ ನದಿ ಕೆಳಗಿನ ಕಣಿವೆಯೊಳಗೆ ಹರಿಯುವುದು. ರಸ್ತೆ ಕೆಲವುವೇಳೆ ನದಿಗಿಂತ ೪೦೦ ೫೦೦ ಅಡಿಗಳ ಮೇಲೆ ಇರುತ್ತದೆ. ಆಗ ಗಂಗಾ ಮಹಾತಾಯಿ ದರ್ಶನ ಭೀಕರವಾಗಿ ಕಾಣುವುದು. ಭಕ್ತಿಯನ್ನು ಉದ್ರೇಕಿಸುವ ಬದಲು ಆ ಮಹಾತಾಯಿ ಕಣಿವೆಯೊಳಗೆ ಬಾಯಿ ತೆಗೆದುಕೊಂಡು ನುಂಗಲು ಸಿದ್ಧವಾಗಿರುವ ಮಹಾ ಅಜಗರದಂತೆ ಕಾಣುವಳು. ಬಸ್ಸು ಹೋಗುತ್ತಿರುವಾಗ ಏನಾದರೂ ಸ್ವಲ್ಪ ಅಚಾತುರ್ಯವಾದರೂ ಗಂಗಾಮಾತೆಗೆ ಸಮರ್ಪಣೆ ಬಸ್ಸು. ಹೀಗೆ ಆಗುವುದು ಅಪರೂಪವಲ್ಲವಂತೆ. ಕಳೆದ ವರ್ಷ ಒಂದು ಬಸ್ಸು ಉರುಳಿ ಯಾತ್ರಿಕರ ಸಮೇತ ಗಂಗಾನದಿಯಲ್ಲಿ ಸಂಪೂರ್ಣ ಮಾಯವಾಯಿತೆಂದು ಪೇಪರಿನಲ್ಲಿ ಓದಿದ್ದ ನೆನಪೂ ಬಂತು. ಅಂತೂ ದೇವಪ್ರಯಾಗ ಸೇರುವವರೆಗೆ ಅಪಾಯ ಯಾವಾಗಲೂ ಬಲಗಡೆ ಕಾದುಕೊಂಡಿತ್ತು. ಯಾವಾಗ ಅಪಾಯ ನಮ್ಮನ್ನು ಕಾಡುತ್ತಿರುವುದೊ ಆಗ ದೇವರನ್ನು ಚಿಂತಿಸದೆ ವಿಧಿಯಿಲ್ಲ. ಅದಕ್ಕೇ ಕುಂತಿ ಶ್ರೀಕೃಷ್ಣನನ್ನು ಪ್ರಾರ್ಥಿಸುವಾಗ "ಯಾವಾಗಲೂ ವಿಪತ್ತಿನ ಪರಂಪರೆಯನ್ನೇ ಕರುಣಿಸು. ಆಗ ಮಾತ್ರ ನಿನ್ನನ್ನು ಚಿಂತಿಸುತ್ತಿರುವೆವು. ಸುಖ ಬಂದರೆ ನಿನ್ನನ್ನು ಮರೆಯುವ ಅಪಾಯವಿದೆ" ಎಂದು ಬೇಡಿಕೊಂಡಳು.

ದಾರಿ ಅಗಲವಿಲ್ಲದೆ ಇರುವುದರಿಂದ ಒಂದು ಬಸ್ಸು ಬರುವಾಗ ಮತ್ತೊಂದು ಅದಕ್ಕೆ ಎದುರಾಗಿ ಹೋಗಲು ಅವಕಾಶವಿಲ್ಲ. ಆದಕಾರಣ ಬಸ್ಸುಗಳೆಲ್ಲ

ಹೋಗುವಾಗ ಒಂದರ ಹಿಂದೆ ಒಂದು ಹೋಗುವುವು. ಅಲ್ಲಿ ಹೋಗುವುದು ಒಂದು ಎರಡು ಬಸ್ಸುಗಳಲ್ಲ, ೫೦-೬೦ ಬಸ್ಸುಗಳ ಸಾಲೇ ಒಂದೊಂದು ಸಲಕ್ಕೆ ಹೋಗುವುವು. ಬಸ್ಸುಗಳ ಜೊತೆಯಲ್ಲಿ ಲಾರಿಗಳು ಬೇರೆ ಇರುತ್ತವೆ. ಬೆಟ್ಟ ಹತ್ತಿಹತ್ತಿ ಹೋಗುವಾಗ ಎಂಜಿನ್ ಶಾಖವಾಗಿ ಹೋಗುವುದು. ನಾಲ್ಕೈದು ಮೈಲಿಗೆ ಒಂದೊಂದು ಸಲ ನಿಲ್ಲಿಸಿ ಹತ್ತಿರ ಹರಿಯುವ ಝರಿಯ ನೀರನ್ನು ರೇಡಿಯೇಟರಿಗೆ ಹಾಕಿ ಕೋಪ ಶಮನಮಾಡಿ ಹೋಗಬೇಕು. ಆ ರೇಡಿಯೇಟರ್ ತೆಗೆಯುವಾಗಲಂತೂ ಮುಚ್ಚಳ ಕಾದುಹೋಗಿರುತ್ತದೆ. ಬಿರಟೆಯನ್ನು ತೆಗೆದೊಡನೆಯೆ ಭುಗ್ಗೆಂದು ಆವಿಯ ನೀರು ಮೇಲೇಳುವಾಗ ಶಿವನ ಉರಿಗಣ್ಣನ್ನು ನೆನಪಿಗೆ ತರುತ್ತಿತ್ತು.

ದಾರಿಯಲ್ಲಿ ಹೋಗುತ್ತಿರುವಾಗ ನಮ್ಮ ಬಸ್ಸು ಹೋಗುತ್ತಿದ್ದ ರೀತಿ ಮತ್ತು ಆ ರಸ್ತೆ ನೋಡಿ ಪಕ್ಕದಲ್ಲಿರುವವರಿಗೆ "ನಾವು ಎಲ್ಲದಕ್ಕೂ ಸಿದ್ಧವಾಗಿರಬೇಕು" ಎಂದೆ. ಅನೇಕರಿಗೆ ಈ ಮಾತು ಅಷ್ಟು ಹಿಡಿಸಲಿಲ್ಲ. ಪ್ರಯಾಣಕ್ಕೆ ಮುಂಚೆ ಈ ಮಾತು ನಿಮ್ಮ ಬಾಯಿಂದ ಬರಬೇಕೆ ಎಂದು ಅವರು ಆಕ್ಷೇಪಣೆ ಮಾಡಿದರು. ಅವರಿಗೆ ಪ್ರಯಾಣವೆಂದರೆ ಎಲ್ಲ ಸುಸೂತ್ರವಾಗಿ ನಡೆಯಬೇಕು. ಆದರೆ ನನ್ನ ಜೀವನದಲ್ಲಿ ಪ್ರಯಾಣ ಒಂದೇಅಲ್ಲ, ಹಲವು ವಿಷಯಗಳು ನಾವೊಂದೆಣಿಸಿದರೆ ಅದೊಂದು ಆಗಿರುವುದು. ಪ್ರಯಾಣದಲ್ಲಂತೂ ರೈಲು ಲೇಟಾಗಿ ಹೋಗುವುದು, ಬಸ್ಸು ನಿಂತುಹೋಗುವುದು, ಸಮಯಕ್ಕೆ ಸರಿಯಾಗಿ ಸಿಕ್ಕದೆ ಇರುವುದು ಇವೆಲ್ಲಾ ಮಾಮೂಲು. ಅದಕ್ಕೇ ಪ್ರಯಾಣ ಮಾಡುವಾಗ ಇವುಗಳನ್ನೆಲ್ಲ ನಿರೀಕ್ಷಿಸುವುದು ನನ್ನ ಸ್ವಭಾವವಾಗಿಬಿಟ್ಟಿದೆ. ಭವಿಷ್ಯದ ಗರ್ಭದಲ್ಲಿ ಏನೇನು ಹುದುಗಿರುವುದೋ ಯಾರಿಗೆ ಗೊತ್ತು. ಯಾವ ಯಾವ ಪೆಟ್ಟು, ಯಾವ ಯಾವ ಶಹಭಾಸ್‌ಗಿರಿ ನಮ್ಮ ಆತ್ಮವಿಕಾಸಕ್ಕೆ ಬೇಕೊ ಅದೆಲ್ಲ ನಮ್ಮನ್ನು ಇಲ್ಲಿಗೆ ಕಳುಹಿಸಿರುವವನಿಗೆ ಗೊತ್ತು. ಅವನು ಏತಕ್ಕೆ ಇವನ್ನೆಲ್ಲ ಕಳುಹಿಸುವನು ಎಂಬುದನ್ನು ತರ್ಕಿಸುವುದಕ್ಕಿಂತ ಅವನ ತೀರ್ಪಿಗೆ ತಲೆಯೊಡ್ಡುವುದೆ ಲೇಸೆನಿಸುವುದು.

ಬಸ್ಸು ಸುತ್ತಿ ಸುತ್ತಿ ಹತ್ತಿ ಹೋಗುತ್ತಿತ್ತು. ಆ ಇಕ್ಕಾಡದ ವಕ್ರಾಕಾರದ ರಸ್ತೆಯಲ್ಲಿ ಡ್ರೈವರು ಎಷ್ಟು ನಿರ್ಲಕ್ಷ್ಯನಾಗಿ ಹೋಗುವನು. ಅವನಿಗೆ ಕೆಳಗೆ

ಬಾಯೊಡ್ಡಿ ಹರಿಯುವ ಗಂಗಾನದಿಯು ಅಂಜಿಕೆಯೇ ಇಲ್ಲದಂತೆ ತೋರುವುದು. ನಾವು ಜೀವನದಲ್ಲಿ ಇಂತಹ ದೃಶ್ಯವನ್ನು ನೋಡುವುದು ಅಪರೂಪ. ಆದರೆ ಡ್ರೈವರು ದಿನಾ ಬೆಳಗೆದ್ದರೆ ಆ ರಸ್ತೆಯಲ್ಲಿ ಹೋಗುತ್ತಿರಬೇಕು. ಅಪಾಯ ಅಪರೂಪವಾಗಿ ಬಂದರೆ ಮನುಷ್ಯ ಅಂಜುತ್ತಾನೆ. ಆದರೆ ಯಾವಾಗಲೂ ಅದರ ಛಾಯೆಯಡಿ ಬೆಳೆಯುವವರಿಗೆ ಇದರ ಪರಿವೆಯೇ ಇರುವಂತೆ ಕಾಣುವುದಿಲ್ಲ. ಬಸ್ಸು ಹೋಗುತ್ತಿದ್ದಾಗ ದೊಡ್ಡದೊಂದು ಶಬ್ದ ಕೇಳಿಸಿತು. ತಕ್ಷಣ ಡ್ರೈವರ್ ನಿಲ್ಲಿಸಿ ನೋಡಲು ಮುಂದಿನ ಟೈರ್ ಬರ್ಸ್ಟ ಆಗಿತ್ತು. ಸರಿ, ನನ್ನೊಡನೆ ಬಂದಿರುವವರು “ ನಿಮ್ಮ ಬಾಯಲ್ಲಿ ಬಂದುದೇ ತಡ, ಆಗಲೇ ಏನೋ ಆಯಿತಲ್ಲ” ಎಂದು ಹಂಗಿಸಿದರು. “ಆದರೆ ಅದು ಇಷ್ಟರಲ್ಲೇ ಪರ್ಯವಸಾನವಾಯಿತಲ್ಲ. ಇನ್ನೇನಾದರೂ ಆಗಿದ್ದರೆ ಆಕ್ಷೇಪಣೆ ಮಾಡುವುದಕ್ಕೂ ಯಾರೂ ಇರುತ್ತಿರಲಿಲ್ಲ” ಎಂದೆ. ತಕ್ಷಣ ಬೇರೊಂದು ಟೈರನ್ನು ಇಟ್ಟು ಹದಿನೈದು ನಿಮಿಷದಲ್ಲಿ ಬಸ್ಸನ್ನು ರಿಪೇರಿಮಾಡಿ ಹೊರಟೆ.

ಸುಮಾರು ನಾಲ್ಕು ಗಂಟೆ ಹೊತ್ತಿಗೆ ಬಸ್ಸು ದೇವಪ್ರಯಾಗಕ್ಕೆ ಬಂದಿತು. ಇದು ಸಮುದ್ರ ಮಟ್ಟಕ್ಕೆ ೧೩೫೦ ಅಡಿ ಎತ್ತರದಲ್ಲಿದೆ. ದೂರದಿಂದಲೇ ದೇವ ಪ್ರಯಾಗದ ಊರು ಕಾಣುವುದು. ಬೆಟ್ಟದ ಅಂಚಿನಲ್ಲಿ ಮನೆಗಳನ್ನು ಕಟ್ಟಿರುವರು. ಮನೆಯ ಕೆಳಗೆ ಕಣಿವೆಯಲ್ಲಿ ಭಾಗೀರಥಿ ಮತ್ತು ಅಳಕನಂದಾ ನದಿಗಳು ಹರಿದುಕೊಂಡು ಬಂದು ಒಂದು ಕಡೆ ಸೇರುವುವು. ಎರಡು ನದಿ ಅಂಚಿನಲ್ಲಿಯೂ ಇಕ್ಕಟ್ಟಾಗಿರುವ ಕಡೆ ಆ ಊರು ಬೆಳೆದಿದೆ. ನದಿಯ ಪಕ್ಕದಲ್ಲೇ ಮನೆಗಳ ಸಾಲಿದೆ. ಯಾವಾಗಲೂ ಭೋರ್ಗರೆದು ಹರಿಯುತ್ತಿರುವ ಹಿಮ ಪ್ರವಾಹಗಳೆರಡು ನಿತ್ಯವಾದ್ಯ ಧ್ವನಿಯ ಹಿನ್ನೆಲೆಯನ್ನು ಕಲ್ಪಿಸಿವೆ, ಆ ನಗರಿಗೆ. ಬಸ್ಸಿನಿಂದ ಇಳಿದುದೆತಡ, ಪಂಡರ ತಂಡ ಮುತ್ತಿತು. ಪಂಡರೆಂಬ ಪದ ಉತ್ತರ ಕಾಂಡದ ತೀರ್ಥಯಾತ್ರೆಯಲ್ಲಿ ಯಾತ್ರಿಕರ ಸಹಾಯಾರ್ಥವಾಗಿ ಇರುವ ಒಂದು ಜನ. ಅವರ ಕಸಬೆ ಯಾತ್ರಿಕರನ್ನು ಸುಲಿದು ತಿನ್ನುವುದು. ಆ ಪೂಜೆಮಾಡಿಸಿ. ಈ ಪೂಜೆಮಾಡಿಸಿ ಎನ್ನುವರು. ಪಿತೃಗಳನ್ನು ಪರಲೋಕಕ್ಕೆ ಕಳುಹಿಸುವುದಕ್ಕೆ ಇದು ಶ್ರೇಷ್ಠಸ್ಥಾನವೆನ್ನುವರು. ಇಲ್ಲಿ ದಾನಮಾಡಿದರೆ ಒಂದಕ್ಕೆ ಸಾವಿರದಷ್ಟು ಪುಣ್ಯ ಫಲಿಸುವುದು ಎನ್ನುವರು. ಇವರನ್ನು ನೋಡಿದಗೆ ಜಿಗುಪ್ಸೆ ಬರುವುದು.

ಪೂಜೆ ಮಾಡಿಸುವರು, ಆದರೆ ಮಂತ್ರವೇ ಚೆನ್ನಾಗಿ ಬರುವುದಿಲ್ಲ. ಬ್ರಾಹ್ಮಣ ರೆಂದು ಕರೆಸಿಕೊಳ್ಳುವರು, ಸ್ನಾನ ಸಂಧ್ಯಾವಂದನೆ ಯಾವುದರ ಆವಶ್ಯಕತೆಯೂ ಇವರಿಗಿಲ್ಲ. ವಿದ್ಯೆಯಿಲ್ಲ, ಸಂಸ್ಕೃತಿಯಿಲ್ಲ. ಜನರನ್ನು ಪೀಡಿಸಿ ದುಡ್ಡು ವಸೂಲು ಮಾಡುವ ರಣಹದ್ದುಗಳಂತೆ ಇರುವರು. ಸರಿಯಾಗಿ ದುಡ್ಡು ಕೊಡದೆ ಹೋದರೆ ಮನಸ್ಸಿ ನಿಂದೆಯ ಮಳೆ ಕರೆಯುವರು. ದಾರಿಯಲ್ಲಿ ಸಿಕ್ಕುವ ಭಿಕ್ಷುಕರನ್ನಾದರೂ ಮೆಚ್ಚಬಹುದು, ಆದರೆ ಈ ಪಂಡರನ್ನು ಸಹಿಸುವುದು ದುಸ್ಸಾಧ್ಯವಾಗುವುದು. ಈ ಸಂಸ್ಥೆ ಯಾವುದೋ ಕಾಲದಲ್ಲಿ ಪ್ರಯೋಜನಕಾರಿಯಾಗಿದ್ದಿರಬಹುದು. ಆದರೆ ಈಗ ಹಿಂದೂ ಸಂಸ್ಕೃತಿಯಲ್ಲಿ ಬೆಳೆದ ಒಂದು ಕಳೆ. ಇದನ್ನು ಸಾಧ್ಯ ವಾದಷ್ಟು ಬೇಗ ನಿರ್ಮೂಲಮಾಡಿದರೆ ಮೇಲು ಎನಿಸುವುದು, ಅವರ ಕಾಟ ವನ್ನು ಸಹಿಸದಾಗ.

ದೇವಪ್ರಯಾಗದಲ್ಲಿ ಒಂದು ಕಡೆ ತಂಗಿದೆವು. ಮನೆ ಆಳದ ಕಣಿವೆಯಲ್ಲಿ ನದಿಯಮೇಲೆ ಇತ್ತು. ಮನೆ ಹಿಂದುಗಡೆ ಬಂದು ನಿಂತರೆ ಸುಮಾರು ನೂರಡಿ ಕೆಳಗೆ ನದಿ ಹರಿದುಹೋಗುತ್ತಿರುವುದು. ಕಡಿದಾದ ಕಣಿವೆಯಲ್ಲಿ ಅಕ್ಕಪಕ್ಕದ ಕಲ್ಲುಬಂಡೆಗಳನ್ನು ಝಾಡಿಸಿಕೊಂಡು ಹೋಗುವಾಗ ಹೊರಹೊಮ್ಮುವ ಧ್ವನಿ ದೇವಪ್ರಯಾಗದ ಊರಿನ ಚಟುವಟಿಕೆಗೆ ಬೃಹತ್ ರುದ್ರವೀಣಾಧ್ವನಿಯ ಹಿನ್ನೆಲೆ ಯಂತಿದೆ. ಅಂದು ಸಂಜೆ ಕೆಳಗಿಳಿದು ನದೀತೀರದಲ್ಲಿ ಇರುವ ಸೈಕತ ರಾಶಿಯಮೇಲೆ ಕುಳಿತೆ. ಸೂರ್ಯಾಸ್ತಮಯವಾಗಿತ್ತು. ತಿಳಿ ಆಗಸದಲ್ಲಿ ಅಷ್ಟಮಿಯ ಚಂದ್ರ ತೇಲುತ್ತಿದ್ದ. ತಂಪಾದ ನೀರಿನ ಮೇಲಿನಿಂದ ಬೀಸಿಕೊಂಡು ಬರುವ ಗಾಳಿ ಆಹ್ಲಾದಕರವಾಗಿತ್ತು. ಇದೇ ಊರಿನಲ್ಲಿ ಹಿಂದೆ ಶ್ರೀರಾಮ ತಪಸ್ಸನ್ನು ಮಾಡಿದನಂತೆ. ರಾವಣವಧಾನಂತರ ಬ್ರಹ್ಮಹತ್ಯಾದೋಷ ಬರಲು ಅದರಿಂದ ಪಾರಾಗುವುದಕ್ಕೆ ಈ ತಪಸ್ಸು. ಈ ಬ್ರಹ್ಮಹತ್ಯಾದೋಷ ಯಾರನ್ನೂ ಬಿಡುವುದಿಲ್ಲ. ರಾಮನನ್ನೂ ಬಿಡಲಿಲ್ಲ. ಶಿವನನ್ನೂ ಬಿಡಲಿಲ್ಲ. ಶಿವ ಬ್ರಹ್ಮನ ನಾಲ್ಕು ತಲೆಗಳಲ್ಲಿ ಒಂದನ್ನು ಉಗುರಿನಿಂದ ಚಿವುಟಿದಾಗ ಆ ತಲೆ ಅವನ ಕೈಬೆರಳಿಗೇ ಅಂಟಿಕೊಂಡಿತಂತೆ. ಆ ಪಾಪದಿಂದ ಪಾರಾಗುವುದಕ್ಕೆ ಶಿವ ಹಿಮಾಲಯದಲ್ಲಿ ಬದರೀನಾಥಕ್ಕೆ ಯಾತ್ರೆ ಮಾಡಬೇಕಾಯಿತು. ಅಲ್ಲಿಗೆ ಹೋದಾಗ ಅದು ಬಿದ್ದು ಹೋಯಿತೆಂದು ಹೇಳುವರು. ತನಗೆ ಏನೂ ಕೆಡಕು

ಮಾಡವೆ, ಲೋಕಕಂಟಕನಾಗದೆ ಇದ್ದ ವಾಲಿಯನ್ನು ಕೊಂದುದಕ್ಕೆ ರಾಮ ಪಶ್ಚಾತ್ತಾಪ ಪಡಲಿಲ್ಲ, ತಪಸ್ಸುಮಾಡಲಿಲ್ಲ. ಲೋಕಕಂಟಕನಾದ ರಾವಣನನ್ನು ಸಂಹರಿಸಿದುದಕ್ಕೆ ರಾಮುನನ್ನೇ ತಪಸ್ಸು ಮಾಡುವಂತೆ ನಮ್ಮ ಜನ ಬಲಾತ್ಕರಿಸು ವರು. ಏಕೆಂದರೆ ರಾವಣ ಜಾತಿಯಲ್ಲಿ ಬ್ರಾಹ್ಮಣನಾಗಿದ್ದನಂತೆ, ವೇದ ಪಾರಾಯಣ ಮಾಡಬಲ್ಲವನಾಗಿದ್ದನಂತೆ! ಜಾತಿಗೆ ಎಷ್ಟು ಪ್ರಾಶಸ್ತ್ಯಕೊಟ್ಟಿರು ವರು ನಮ್ಮವರು ಎಂದುಕೊಂಡೆ. ಅದೇ ಧರ್ಮಶಾಸ್ತ್ರಗಳನ್ನು, ಪುರಾಣಗಳನ್ನು ಬೇರೆ ಕೋಮಿನವರು ಬರೆದಿದ್ದರೆ ಅದು ಬೇರೆ ವಿಧವಾಗಿರುತ್ತಿತ್ತು. ಸ್ವಲ್ಪ ಹೊತ್ತು ಅಲ್ಲೇ ಕುಳಿತಿದ್ದೆ. ಶಿವನ ಜಟಾಜೂಟದಿಂದ ಇಳಿದು ಬಂದ ಗಂಗಾನದಿ ಎದುರಿಗೆ ಹರಿಯುತ್ತಿತ್ತು. ಅವನ ಕೇಶಗಳಲ್ಲಿ ಅಲಂಕೃತನಾದ ಚಂದ್ರನು ನಭೋಮಂಡಲದಲ್ಲಿ ತೇಲುತ್ತಿದ್ದನು. ಸುತ್ತಲೂ ತಿಳಿಬೆಳುದಿಂಗಳಲ್ಲಿ ಮಿಂದ ದೃಶ್ಯ ಉಪನಿಷತ್ತಿನ ಈ ಶ್ಲೋಕವನ್ನು ನೆನಪಿಗೆ ತರುತ್ತಿತ್ತು.

ಆನಂದೋ ಬ್ರಹ್ಮೇತಿ ವ್ಯಜನಾತ್ ।
ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೆ ।
ಆನಂದೇನ ಜಾತಾನಿ ಜೀವನ್ತಿ ।
ಆನಂದಂ ಪ್ರಯತ್ನಬಿಸಂವಿಶಂತ್ತೀತಿ ॥

## ೪

# ರುದ್ರಪ್ರಯಾಗ

ಮೂರನೆ ದಿನ ಬೆಳಿಗ್ಗೆ ಸಂಗಮದಲ್ಲಿ ಸ್ನಾನಮಾಡಲು ಹೋದೆವು. ಇಲ್ಲಿ ಭಾಗೀರಥಿ ಮತ್ತು ಅಳಕನಂದಾ ನದಿಗಳು ಸಂಗಮಿಸುವುವು, ದಕ್ಷಿಣದಲ್ಲಿರುವ ನಮಗೆಲ್ಲ ಗಂಗೆಗೆ ಇರುವ ಬೇರೆ ಬೇರೆ ಹೆಸರು ಇವು ಎಂಬ ಭಾವನೆ. ಆದರೆ ಭಾಗೀರಥಿ, ಅಳಕನಂದಾ, ಮಂದಾಕಿನಿ ಎಲ್ಲಾ ಬೇರೆಬೇರೆ ನದಿಗಳು ಎಂದು ಇಲ್ಲಿಗೆ ಬಂದಮೇಲೆ ಅರಿವಾಗುವುದು. ಭಾಗೀರಥಿ ಅಳಕನಂದಾ ಎರಡೂ ದೊಡ್ಡ ಪ್ರವಾಹಗಳು. ಮಳೆ ಬಿಸಿಲು ಕಾಲುಗಳೆರಡರಲ್ಲಿಯೂ ಒಂದೇ ಸಮನಾಗಿ ಹರಿಯುತ್ತಿರುವ ಪ್ರವಾಹ ಇವು. ಬಿಸಿಲುಕಾಲದಲ್ಲಿ ಹಿಮಪೋಷಿತ, ಮಳೆಗಾಲದಲ್ಲಿ ಮೇಘಪೋಷಿತ. ಹಿಮಾಲಯದ ಕಣಿವೆಯಲ್ಲಿ ಹರಿಸುಬರುವ ಬೃಹತ್ ಪ್ರವಾಹಗಳು ಇವೆರಡು. ಇವು ಸಂಧಿಸುವ ಸ್ಥಳ ರೋಮಾಂಚನಕಾರಿಯಾಗಿದೆ. ವೇಗವಾದ ಎರಡು ಪ್ರವಾಹ ಸಂಧಿಸಿದಾಗ ಅಲ್ಲಿಂದೇಳುವ ಬಿಳಿನೊರೆಯಮೇಲೆ ಬಿಸಿಲ ಕಿರಣ ಬಿದ್ದರೆ ಕಾಮನಬಿಲ್ಲು ಅಲ್ಲಿ ಕುಣಿಯುತ್ತಿರುವಂತೆ ತೋರುವುದು. ಅದೊಂದು ಸ್ವರ್ಗೀಯದೃಶ್ಯ. ಶ್ರೀರಾಮ ತಪಸ್ಸು ಮಾಡುವುದಕ್ಕೆ ಇದೇ ಸ್ಥಳವನ್ನು ಆರಿಸಿಕೊಂಡನಂತೆ. ಇದರಲ್ಲೇನು ಆಶ್ಚರ್ಯವಿಲ್ಲ. ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಬಾಹ್ಯ ಪ್ರಕೃತಿ ಸೌಂದರ್ಯವಿರುವ ಕಡೆ ಜನ ಇಳಿದುಕೊಂಡು ಮಜಾಮಾಡಲು ದೊಡ್ಡ ಹೋಟಲು ತೆಗೆಯುವರು. ನಯಾಗರ ಮುಂತಾದ ಪ್ರಪಾತದಕಡೆ ಹಾಗೇ ಇರುವುದು. ಅಲ್ಲಿಗೆ ಹೋಗುವವರು ವಿಲಾಸಿಗಳು. ಆದರೆ ಭರತಖಂಡದಲ್ಲಿ

ಪ್ರಕೃತಿಯ ರಮ್ಯಸ್ಥಳಗಳಲ್ಲಿ ದೇವಸ್ಥಾನಗಳನ್ನು ನಿರ್ಮಿಸುವರು. ಮಹಾ ಪ್ರಪಾತ, ಪರ್ವತಶಿಖರ, ಸಂಗಮಸ್ಥಳಗಳೆಲ್ಲ ದೇವದೇವಿಯರ ನೆನಪು ತರುವುವು. ಅಲ್ಲಿ ತಪಸ್ಸು ಮಾಡಿದ ಋಷಿಗಳನ್ನು ಜ್ಞಾಪಿಸುವುವು. ಅಲ್ಲಿಗೆ ಬರುವವರು ಯಾತ್ರಿಕರ ತಂಡ, ವಿಲಾಸಿಗಳಲ್ಲ. ಸೌಂದರ್ಯವನ್ನು ಭೋಗದ ಕಡೆಗೆ ಬೇಕಾದರೂ ತಿರುಗಿಸಬಹುದು. ತ್ಯಾಗದ ಕಡೆಬೇಕಾದರೂ ತಿರುಗಿಸಬಹುದು. ಪೌರಾತ್ಯ ಸಂಸ್ಕೃತಿಯಲ್ಲಿ ಪ್ರಕೃತಿಸೌಂದರ್ಯವನ್ನು ಬ್ರಹ್ಮಸಾಕ್ಷಾತ್ಕಾರದ ಕಡೆಗೆ ಒಯ್ಯುವ ಸೋಪಾನ ಪಂಕ್ತಿಯನ್ನಾಗಿ ಮಾಡಿರುವರು. ಆ ಸಂಗಮ ಸ್ಥಳದ ಮೇಲೆಯೇ ಒಂದು ಶ್ರೀರಾಮಚಂದ್ರನ ಗುಡಿ ಇದೆ. ಅದೇ ಅವನು ತಪಸ್ಸು ಮಾಡಿದ ಸ್ಥಳವೆನ್ನುವರು.

ಸಂಗಮದಲ್ಲಿ ಸ್ನಾನಮಾಡಬೇಕಾದರೆ ಸುಮಾರು ನೂರು ಅಡಿ ಇಳಿದು ಹೋಗಬೇಕು. ಸ್ನಾನಮಾಡುವಾಗ ಬಹಳ ಜೋಪಾನವಾಗಿರಬೇಕು. ಎರಡು ಪ್ರವಾಹಗಳೂ ವೇಗದಿಂದ ಹರಿಯುತ್ತಿವೆ. ಸ್ನಾನಮಾಡುವಾಗ ಮೇಲಿನಿಂದ ಇಳಿಬಿಟ್ಟ ಒಂದು ಸರಪಳಿಯನ್ನು ಬಲವಾಗಿ ಹಿಡಿದುಕೊಂಡಿರಬೇಕು. ಇಲ್ಲದೆ ಇದ್ದರೆ ಶಿವನ ಪಾದಗಳನ್ನು ಒಮ್ಮೆಯೇ ಸೇರಬೇಕಾಗುವುದು. ಇಲ್ಲಿ ಸ್ನಾನ ಮಾಡುವಾಗ ಮತ್ತೊಂದು ಅಪಾಯವಿದೆ. ಆದೇ ಹಲವು ದೊಡ್ಡ ಹಲಗೆಗಳು ನೀರಿನಲ್ಲಿ ತೇಲಿಹೋಗುತ್ತಿರುತ್ತವೆ. ಅವೇನಾದರೂ ನಾವು ಹಿಂತಿರುಗಿದಾಗ ಬೆನ್ನಿಗೆ ತಾಕಿದರೆ ಸರಪಳಿ ಹಿಡಿದ ಕೈಜಾರಿ ನಾವೂ ಪ್ರವಾಹದೊಡನೆ ಹೋಗ ಬೇಕಾಗುವುದು. ಆ ವೇಗದಲ್ಲಿ ಈಜು ಬಂದವನು ಬಾರದವನು ಇಬ್ಬರೂ ಒಂದೇ. ಸ್ನಾನಮಾಡಿ ಶ್ರೀರಾಮಚಂದ್ರನಿಗೆ ಮಣಿದು ಸುಮಾರು ಹನ್ನೊಂದು ಗಂಟೆ ಹೊತ್ತಿಗೆ ರುದ್ರಪ್ರಯಾಗಕ್ಕೆ ಹೋಗುವ ಬಸ್ಸಿಗಾಗಿ ನಿಲ್ದಾಣದಲ್ಲಿ ಕಾದು ಕುಳಿತೆವು. ಹಿಮಾಲಯ ಎಂದು ನಾವು ಈ ಸ್ಥಳವನ್ನು ಕರೆದರೂ ಇದು ೧೫೦೦ ಅಡಿ ಎತ್ತರದಲ್ಲಿ ಮಾತ್ರ ಇರುವುದು. ಉರಿಬಿಸಿಲು. ಇಲ್ಲಿ ಬಸ್ಸಿಗೆ ಕಾಯುವುದೇ ಒಂದು ತಪಸ್ಸು ಮಾಡಿದಂತೆ.

ಸುಮಾರು ಎರಡು ಗಂಟೆ ಬಸ್ಸಿನ ನಿಲ್ದಾಣದಲ್ಲಿ ಪಂಚತಪವನ್ನು ಮಾಡಿದ್ದಾಯಿತು. ಪಂಚತಪ ಎಂದರೆ ಒಳ್ಳೆ ಉರಿಬಿಸಿಲಿನಲ್ಲಿ ಸುತ್ತಲೂ ಬೆಂಕಿ ಹತ್ತಿಸಿ ಮಧ್ಯದಲ್ಲಿ ಕುಳಿತು ತಪಸ್ಸು ಮಾಡುವುದು. ಆಗ ದೇವರು

ಬೇಗ ಒಲಿಯುತ್ತಾನಂತೆ. ಹಾಗೆಯೇ ತಪಸ್ಸು ಮಾಡಿದಮೇಲೆ ನಮ್ಮನ್ನು ಸುರಕ್ಷಿತವಾಗಿ ಕೊಂಡೊಯ್ಯುವ ಬಸ್ಸಿನ ದೇವತೆ ಅನಂತರ ಪ್ರತ್ಯಕ್ಷವಾದಳು. ಅಲ್ಲಿಂದ ೨೦ ಮೈಲಿಗಳ ದೂರದಲ್ಲಿರುವ ಕೀರ್ತಿ ನಗರಕ್ಕೆ ಹೊರಟೆವು. ಆ ದೂರವನ್ನು ಸೇರುವುದಕ್ಕೆ ಸುಮಾರು ಎರಡು ಗಂಟೆ ಹಿಡಿಯಿತು. ಅಲ್ಲಿ ಅಳಕನಂದಾ ನದಿಯನ್ನು ದಾಟಲು ಬಸ್ಸುಗಳಿಗೆ ಇನ್ನೂ ಸೇತುವೆ ನಿರ್ಮಿಸಿಲ್ಲ. ಹೃಷೀಕೇಶದಿಂದ ಬರುವ ಬಸ್ಸು ಇಲ್ಲಿಯವರೆಗೆ ಮಾತ್ರ ಬರುವುದು. ಇಲ್ಲಿಂದ ಪ್ರಯಾಣಿಕರು ಮಾತ್ರ ನಡೆಯಬಹುದಾದ ಸೇತುವೆಯಲ್ಲಿ ನದಿ ದಾಟಿ ಆ ಕಡೆಗೆ ಹೊರಟೆವು. ಅಲ್ಲಿಂದ ಶ್ರೀ ನಗರಕ್ಕೆ ಮೂರು ಮೈಲಿ. ಅಲ್ಲಿಗೇ ಬೇರೆ ಬಸ್ಸು ಇದೆ. ಅದರಲ್ಲಿ ಕುಳಿತು ಶ್ರೀನಗರಕ್ಕೆ ಮೂರುಗಂಟೆ ಹೊತ್ತಿಗೆ ತಲಪಿದೆವು. ಅಲ್ಲಿಂದ ರುದ್ರಪ್ರಯಾಗಕ್ಕೆ ಇಪ್ಪತ್ತು ಮೈಲಿಗಳು. ಅದಕ್ಕೆ ಬೇರೆ ಬಸ್ಸಿನಲ್ಲಿ ಪ್ರಯಾಣ ಮಾಡಬೇಕು. ಬಸ್ಸಿನ ನಿಲ್ದಾಣದಲ್ಲಿ ವಿಚಾರಿಸಲು ಅದು ಐದು ಗಂಟೆಗೆ ಹೊರಡುವುದು ಎಂದರು. ಎಲ್ಲಿಯಾದರೂ ಕುಳಿತು ಎರಡು ಗಂಟೆಗಳ ಕಾಲ ಕಳೆಯಬೇಕಾಗಿತ್ತು. ಎದುರಿಗೆ ನೋಡಿದಾಗ ಅಳಕನಂದಾ ಹೋಟಲ್ ಎಂದು ದೊಡ್ಡ ಅಕ್ಷರದ ಬೋರ್ಡೊಂದು ಗೋಚರಿಸಿತು. ಆ ಹೋಟಲಿನ ಗೋಡೆಯ ಮೇಲೆ ಕನ್ನಡ ಅಕ್ಷರಗಳಲ್ಲಿ ದೋಸೆ, ಇಡ್ಲಿ ಮುಂತಾದುವೆಲ್ಲಾ ದೊರಕುತ್ತವೆ ಎಂದು ಬರೆದಿತ್ತು. ಅದನ್ನು ನೋಡಿ ಯಾರೋ ಉಡುಪಿ ಬ್ರಾಹ್ಮಣರು ಇಲ್ಲಿ ಇರಬಹುದೆಂದು, ಅವರ ಹತ್ತಿರ ಸ್ವಲ್ಪ ಕನ್ನಡ ಮಾತನಾಡಿ ಸಿಕ್ಕಿದರೆ ದೋಸೆ ಉಪ್ಪಿಟ್ಟು ತಿನ್ನೋಣವೆಂದು ಹೋದೆವು. ವಿಚಾರಿಸಿದಾಗ ಹೋಟಲು ಮಾಲೀಕನಿಗೆ ಕನ್ನಡವೂ ಬಾರದು, ದೋಸೆ ಉಪ್ಪಿಟ್ಟು ಮಾಡುವುದಕ್ಕೂ ಬಾರದು. ಹೇಗೆ ಕನ್ನಡದಲ್ಲಿ ಬೋರ್ಡ್ ಬರೆಸಿದೆ ಎಂದಾಗ, ಯಾರೋ ಕನ್ನಡ ಮಾತನಾಡುವವರು ಬಂದಿದ್ದಾಗ ಅವರ ಕೈಯಿಂದ ಬೋರ್ಡ್ ಬರೆಸಿದೆ ಎಂದ. ಅದೆಲ್ಲಾ ವ್ಯಾಪಾರ ರಹಸ್ಯ! ದಕ್ಷಿಣ ದೇಶದಿಂದ ಕನ್ನಡ ಮಾತನಾಡುವವರು ಯಾರಾದರೂ ಈ ಬೋರ್ಡನ್ನು ನೋಡಿದರೆ ತಕ್ಷಣ ಇಲ್ಲಿಗೆ ಬರುತ್ತಾರೆ, ಯಾರೊ ತಮ್ಮ ಕಡೆಯವರು ಇರಬಹುದೆಂದು. ಇದಲಿ ದೋಸೆ ಮಾಡಿ ಕೊಡುತ್ತೀಯ ಎಂದು ಕೇಳಿದ್ದಕ್ಕೆ ಜನ ಜಾಸ್ತಿ ಬಂದರೆ ಮಾಡಿಕೊಡುತ್ತೇನೆ, ಒಬ್ಬಿಬ್ಬರಿಗೇ ಆದರೆ ಮಾಡಲು ಸಾಧ್ಯವಿಲ್ಲ ಎಂದನು. ಆ ಹೋಟೆಲಿನಲ್ಲಿ

ಟೀ ಕುಡಿದು ಬಸ್ಸಿಗೆ ಕಾಯುತ್ತಿದ್ದಾಗ ಅಡ್ಡಾಡಿಕೊಂಡು ಬರುವ ಎಂದು ನಾನು ಹೊರಟೆ.

ಶ್ರೀ ನಗರ ಬೆಟ್ಟದ ಮೇಲೆ ದೊಡ್ಡ ಬಯಲಿನಲ್ಲಿದೆ. ದೇವಪ್ರಯಾಗದಂತೆ ಕಿಷ್ಕಿಂಧವಲ್ಲ, ವಿಶಾಲವಾಗಿದೆ. ಸುಮಾರು ೧೩೦೦ ಅಡಿ ಎತ್ತರದಲ್ಲಿದೆ. ಈ ನಗರವನ್ನು ಶಂಕರಾಚಾರ್ಯರು ಆಗಿನ ರಾಜನ ಕೈಯಿಂದ ಶ್ರೀಚಕ್ರದೋಪಾದಿಯಲ್ಲಿ ಕಟ್ಟಿಸಿದರೆಂದು ಹೇಳುವರು. ಅಲ್ಲಿ ಮಧ್ಯದಲ್ಲಿ ಒಂದು ದೇವಿಯ ದೇವಸ್ಥಾನವಿದೆ. ಶಂಕರಾಚಾರ್ಯರು ಬರುವುದಕ್ಕೆ ಮುಂಚೆ ಆ ದೇವಿ ಯಾವುದೋ ಒಂದು ಕ್ಷುದ್ರ ದೇವತೆಯಾಗಿತ್ತಂತೆ. ಆ ದೇವಿಗೆ ಬೇಕಾದಷ್ಟು ಪ್ರಾಣಿಗಳನ್ನು ಬಲಿ ಕೊಡುತ್ತಿದ್ದರಂತೆ. ಶಂಕರಾಚಾರ್ಯರು ಪ್ರಾಣಿವಧೆಯನ್ನು ನಿಲ್ಲಿಸಿ ಆ ಪ್ರಾಣಿಗಳ ರಕ್ತವನ್ನು ಬಯಸುವ ದೇವಿಯ ಹೆಸರನ್ನು ಮಾತ್ರ ಬದಲಾಯಿಸಿ ಹೊಸ ಗುಡಿಯನ್ನು ಕಟ್ಟಿಸಿದರು. ಎಂತಹ ಸುಧಾರಣೆ ಇದು. ರಕ್ತಪಾತವಿಲ್ಲದ, ನಿಂದೆ ಘರ್ಷಣೆಗಳಿಲ್ಲದ ಸುಧಾರಣೆ. ಇದು ಹಿಂದೂ ಸಂಸ್ಕೃತಿಯಲ್ಲಿ ಮಾತ್ರ ಸಾಧ್ಯ. ಅನ್ಯಮತದವರು ಎಷ್ಟು ರಕ್ತದ ಕಾಲುವೆ ಹರಿಸಿದರು, ಒಂದು ಧರ್ಮದ ದೇವರನ್ನು ಓಡಿಸಿ ಇನ್ನೊಂದು ಧರ್ಮದ ದೇವರನ್ನು ಆಹ್ವಾನಿಸುವುದಕ್ಕೆ. ಮಹಮ್ಮದೀಯರು ಬಂದರು. ಹಿಂದೂಗಳ ದೇವಸ್ಥಾನ ನಾಶಮಾಡಿ, ಅಲ್ಲಿಯ ದೇವರನ್ನು ಧ್ವಂಸಮಾಡಿ, ಅಲ್ಲಿ ಒಂದು ಮಸೀದಿ ಕಟ್ಟಿದರೆ ಮಾತ್ರ ಅವರಿಗೆ ತೃಪ್ತಿ. ಆದರೆ ಶ್ರೀ ಶಂಕರಾಚಾರ್ಯರು ಅದೇ ದೇವಸ್ಥಾನವಿಟ್ಟರು, ಅದೇ ದೇವರಿಟ್ಟರು, ಸಾಕ್ಷಾತ್ ಭಗವಂತನೇ ಭಕ್ತರಿಗಾಗಿ ಈ ರೂಪಧಾರಣೆ ಮಾಡಿರುವನೆಂದು ಆಯಾ ದೇವದೇವಿಯರ ಹೆಸರಿನಲ್ಲಿ ಅತ್ಯುತ್ತಮವಾದ ಸ್ತೋತ್ರಗಳನ್ನು ರಚಿಸಿದರು. ಆದರೆ ಸುತ್ತಲೂ ದೇವರ ಹೆಸರಿನಲ್ಲಿ ಬೆಳೆದ ಅನಾಚಾರದ ಕಳೆಯನ್ನುಮಾತ್ರ ಕಿತ್ತರು. ಇಂತಹ ಉದಾರಭಾವನೆ ಬರಬೇಕಾದರೆ ಸತ್ಯದ ಪೂರ್ಣ ಸಾಕ್ಷಾತ್ಕಾರವಾಗಿದ್ದರೆ ಮಾತ್ರ ಸಾಧ್ಯ.

ಶ್ರೀ ನಗರದಲ್ಲಿ ಕಮಲೇಶ್ವರ ಎಂಬ ಮತ್ತೊಂದು ಶಿವನ ದೇವಾಲಯ ವಿದೆ. ಶ್ರೀ ರಾಮ ಇಲ್ಲಿ ಶಿವನನ್ನು ಪೂಜಿಸುತ್ತಿದ್ದನಂತೆ. ಒಂದು ಸಾವಿರ

ಕಮಲಗಳಿಂದ ಶಿವನನ್ನು ಪೂಜಿಸುತ್ತಿದ್ದಾಗ ಶಿವ ರಾಮನ ಭಕ್ತಿಯನ್ನು ಪರೀಕ್ಷಿಸಲೋಸುಗ ಒಂದು ಕಮಲವನ್ನು ತೆಗೆದು ಇಟ್ಟನಂತೆ. ಪೂಜಿಸುವಾಗ ಒಂದು ಕಮಲ ಸಾಲದೆಹೋಗಲು ಶ್ರೀರಾಮ ತನ್ನ ಒಂದು ಕಣ್ಣನ್ನೇ ತೆಗೆದು ಶಿವನಡಿದಾವರೆಯಲ್ಲಿಡಲು ಶಿವ ಸುಪ್ರೀತನಾದನೆಂದು ಇಲ್ಲಿಯ ಸ್ಥಳ ಪುರಾಣ ಸಾರುವುದು. ಆದ ಕಾರಣವೆ ಇಲ್ಲಿಯ ಶಿವನಿಗೆ ಕಮಲೇಶ್ವರ ಎಂದು ಹೆಸರು.

ಇವನ್ನೆಲ್ಲ ನೋಡಿಕೊಂಡು ಬಸ್ಸಿನ ಸಮೀಪಕ್ಕೆ ಬರುವ ಹೊತ್ತಿಗೆ ರುದ್ರಪ್ರಯಾಗಕ್ಕೆ ಹೋಗುವ ಬಸ್ಸು ಬಂದಿತು. ಅದರಲ್ಲಿ ಕುಳಿತು ಹೊರಟೆವು. ದಾರಿಯುದ್ದಕ್ಕೂ ಬಸ್ಸು ಬೆಟ್ಟದ ಅಂಚಿನಲ್ಲೇ ಸುತ್ತಿ ಸುತ್ತಿಕೊಂಡು ಹೋಗುವುದು. ಗಿಡ ಮರಗಳೇನೂ ಅಷ್ಟಿಲ್ಲ. ಎಲ್ಲೋ ಇಲ್ಲೊಂದು ಅಲ್ಲೊಂದು ಪೈನ್ ಮರಗಳು ಮಾತ್ರ ಇದ್ದುವು. ಕೆಲವು ಕುರುಚಲು ಪೊದೆಗಳಲ್ಲದೆ ಮತ್ತಾವುದೂ ಇಲ್ಲ. ಸುಮಾರು ಆರೂವರೆ ಗಂಟೆ ಹೊತ್ತಿಗೆ ರುದ್ರಪ್ರಯಾಗವನ್ನು ಸೇರಿದೆವು. ಇಲ್ಲಿಯವರೆಗೆ ಕೇದಾರನಾಥ ಮತ್ತು ಬದರಿಗೆ ಒಂದೇ ರಸ್ತೆ. ಇಲ್ಲಿಂದ ಕೇದಾರನಾಥಕ್ಕೆ ಹೋಗಬೇಕಾದರೆ ೪೮ ಮೈಲಿ ನಡೆದುಕೊಂಡು ಹೋಗಬೇಕು. ಬದರಿಗೆ ಹೋಗಬೇಕಾದರೆ ಬೇರೆ ದಾರಿಯಲ್ಲಿ ಅಳಕನಂದಾ ನದಿಯ ಪಕ್ಕದಲ್ಲೇ ಮತ್ತೂ ೫೨ ಮೈಲಿ ಬಸ್ಸಿನಲ್ಲಿ ಹೋಗಿ ಅಲ್ಲಿಂದ ೩೮ ಮೈಲಿ ನಡೆದು ಹೋಗಬೇಕು. ಸಾಮಾನನ್ನು ಹೊತ್ತುಕೊಂಡು ರುದ್ರಪ್ರಯಾಗದಲ್ಲಿ ಕಾಳಿಕಂಬಳಿವಾಲಾ ಧರ್ಮಶಾಲೆಗೆ ಹೋದೆವು. ಅಳಕನಂದಾ ನದಿಯ ಮೇಲೆಯೆ ಈ ಧರ್ಮಶಾಲೆ ಇದೆ. ರುದ್ರಪ್ರಯಾಗದ ಎತ್ತರ ಸಮುದ್ರ ಮಟ್ಟಕ್ಕಿಂತ ಸುಮಾರು ೨೦೦೦ ಅಡಿಗಳು.

ಹಿಮಾಲಯ ಪ್ರಾಂತ್ಯದಲ್ಲಿ ಹಿಂದೆ ತೀರ್ಥಯಾತ್ರೆ ಮಾಡಬೇಕಾದರೆ ಮಧ್ಯದಲ್ಲಿ ತಂಗಲು ಸರಿಯಾದ ಸ್ಥಳ ಇಲ್ಲದೆ ಬಹಳ ತೊಂದರೆಗೆ ಈಡಾಗುತ್ತಿದ್ದರು. ಕಾಳಿಕಂಬ್ಲಿವಾಲಾ ಎಂಬ ಸಾಧುಗಳು ಭಕ್ತರಿಂದ ಹಣ ಎತ್ತಿ ಮಧ್ಯ ಮಧ್ಯದಲ್ಲಿ ಧರ್ಮಶಾಲೆಗಳನ್ನು ಕಟ್ಟಿಸಿರುವರು. ಸಾಧುಸಂತರಿಗೆ ಅಲ್ಲಿ ಅಡಿಗೆ ಮಾಡಿಕೊಳ್ಳುವುದಕ್ಕೆ ಗೋಧಿಹಿಟ್ಟು, ಬೇಳೆ, ಸೌದೆಯ ಭತ್ಯವನ್ನು

ಬೇರೆ ಕೊಡುವರು. ಈಗ ಆ ಸಾಧುಗಳು ಕಾಲವಾಗಿರುವರು. ಅದಕ್ಕಾಗಿ ಒಂದು ದೊಡ್ಡ ಕಮಿಟಿ, ಪ್ರೆಸಿಡೆಂಟ್, ಸದಸ್ಯ, ಸೆಕ್ರೆಟರಿಯವರು ಇರುವರು. ಬಹಳ ದಕ್ಷತೆಯಿಂದ ಅವರು ಹಲವು ಧರ್ಮಶಾಲೆಗಳನ್ನು ನಡೆಸುತ್ತಿರುವರು.

ರುದ್ರಪ್ರಯಾಗದಲ್ಲಿ ಅಳಕನಂದಾ ಮತ್ತು ಮಂದಾಕಿನಿ ನದಿಗಳು ಸಂಧಿಸುವುವು. ಬದರಿಕಡೆ ಹೋಗಬೇಕಾದರೆ ಅಳಕನಂದಾ ನದಿ ತೀರದಲ್ಲೇ ಹೋಗಬೇಕು. ಕೇದಾರನಾಥಕ್ಕೆ ಹೋಗಬೇಕಾದರೆ ಮಂದಾಕಿನಿ ನದೀ ತೀರದಲ್ಲಿ ಹೋಗಬೇಕು. ಮಂದಾಕಿನಿ ಶಿವನ ಪಾದದೆಡೆ ಕರೆದೊಯ್ಯುವುದು. ಅಳಕನಂದಾ ವಿಷ್ಣುವಿನ ಪಾದದೆಡೆ ಕರೆದೊಯ್ಯುವುದು. ಯಾತ್ರಿಕರಿಗೆ ಈ ನದಿಯೇ ಮಾರ್ಗದರ್ಶಿಯಂತಿದೆ. ಸಂಗಮಸ್ಥಳದಿಂದ ಸ್ವಲ್ಪ ಮೇಲೆ ರುದ್ರನಾಥನ ದೇವಾಲಯವಿದೆ. ಅಲ್ಲಿ ನಿಂತು ನೋಡಿದರೆ ಎರಡು ಕಣಿವೆಯಲ್ಲಿ ಹರಿವ ಈ ಎರಡು ನದಿಗಳೂ ಗೋಚರಿಸುವುವು. ದೇವಸ್ಥಾನಕ್ಕೆ ಯೋಗ್ಯವಾದ ಸ್ಥಳ ಅದು. ದೇವಋಷಿ ನಾರದರು ಇಲ್ಲಿ ಶಿವನ ಅನುಗ್ರಹದಿಂದ ಸಂಗೀತವನ್ನು ಕಲಿತರು ಎನ್ನುವರು. ಒಂದಲ್ಲ, ಎರಡು ನದಿಗಳು ಬಂಡೆಯನ್ನು ಅಪ್ಪಳಿಸಿಕೊಂಡು ಹೋಗುವಾಗ ಏಳುವ ಧ್ವನಿಯೆ ನಾರದರ ಸಂಗೀತಕ್ಕೆ ಶೃತಿಯಾಗಿರಬಹುದು. ಬೃಹತ್‌ಪ್ರಕೃತಿಯ ವಾದ್ಯಶಾಲೆಯಲ್ಲಿ ನಾರದರು ಸಂಗೀತ ಕಲಿತುದರಿಂದಲೇ ಅವರು ಅಷ್ಟು ವಿಖ್ಯಾತರಾಗಿರಬೇಕು. ಅಲ್ಲಿಂದ ಸ್ವಲ್ಪ ಕೆಳಗೆ ಇಳಿದರೆ ಸಂಗಮ ಸ್ಥಳವನ್ನು ನೋಡುತ್ತೇವೆ. ಆದರೆ ಸಂಗಮಕ್ಕೆ ಹೋಗಬೇಕಾದರೆ ಸುಮಾರು ನೂರು ಮೆಟ್ಟಿಲನ್ನು ಕೆಳಗೆ ಇಳಿಯಬೇಕು. ಇಳಿಯುವಾಗ ಮಧ್ಯದಲ್ಲಿ ಒಂದು ದೇವಿಯ ಗುಡಿ ಇದೆ. ಅಲ್ಲಿಂದ ಇನ್ನೂ ಐವತ್ತು ಮೆಟ್ಟಿಲು ಇಳಿದರೆ ರುದ್ರಪ್ರಯಾಗದ ಸಂಗಮ ಸ್ಥಳ. ಬಲಗಡೆಯಿಂದ ಮಂದಾಕಿನಿ ಶಿವನ ಜಟಾಜೂಟದಿಂದ ಹರಿದು ಬರುತ್ತಾಳೆ. ಎಡಗಡೆಯಿಂದ ಅಳಕನಂದಾ ವಿಷ್ಣುವಿನ ಪಾದಪೆಡೆಯಿಂದ ಬರುತ್ತಾಳೆ. ಇಲ್ಲಿ ಶಿವ ಮತ್ತು ವಿಷ್ಣುವಿನ ಕಡೆ ಯಿಂದ ಬಂದ ಪ್ರವಾಹಗಳೆರಡೂ ಸಂದಿಸುವುವು. ಇಲ್ಲಿ ಕೂಡ ದೇವಪ್ರಯಾಗ ದಂತೆ ಸ್ನಾನ ಮಾಡುವಾಗ ಬಹಳ ಎಚ್ಚರಿಕೆಯಿಂದ ಇರಬೇಕು. ಪ್ರವಾಹದ ವೇಗ ಅತಿ. ಬಂಡೆಗಳು ಬಹಳ. ಸರಪಳಿಯನ್ನು ಹಿಡಿದುಕೊಂಡೇ ಸ್ನಾನ

ಮಾಡಬೇಕು. ಸ್ವಲ್ಪ ಅಜಾಗರೂಕರಾಗಿದ್ದರೂ ವೈಕುಂಠಕ್ಕೋ ಕೈಲಾಸಕ್ಕೋ ಒಮ್ಮೆಯೇ ಹಾರಬೇಕಾಗುವುದು. ಮಾರನೆ ದಿನ ಇಲ್ಲಿ ಸ್ನಾನಮಾಡಿ ಹೊರಡಲು ಅಣಿಯಾದೆವು.

೫

# ರಾಮಪುರ

ನಾವು ರುದ್ರಪ್ರಯಾಗಕ್ಕೆ ಬರುವವರೆಗೆ ತೀರ್ಥಯಾತ್ರೆಯ ಭಾಗವೆಲ್ಲ ಬಸ್ಸಿನಲ್ಲೆ ಆಗಿತ್ತು. ಇದುವರೆಗೂ ನಡೆದಿರಲಿಲ್ಲ. ಮಧ್ಯಾಹ್ನ ಸ್ವಲ್ಪ ಬಿಸಿಲು ತಂಪಾದಮೇಲೆ ಹೊರಟು ೭ ಮೈಲಿ ದೂರದಲ್ಲಿರುವ ರಾಮಪುರ ಎಂಬ ಗ್ರಾಮದಲ್ಲಿ ತಂಗುವುದೆಂದು ನಿರ್ಧರಿಸಿದೆವು. ಸುಮಾರು ನಾಲ್ಕು ಗಂಟೆಗೆ "ಜೈ ಕೇದಾರ್‌ನಾಥ್" ಎಂದು ಹೊರಟೆವು. ನಾಲ್ಕು ಕೂಲಿಗಳು ಸಾಮಾನು ಹೊತ್ತುಕೊಂಡು ಹೊರಟರು. ನಾವು ಕಾಲಿಗೆ ಕ್ಯಾನ್ವಾಸ್ ಷೂ ಹಾಕಿ ಕೈಯಲ್ಲಿ ಒಂದೊಂದು ದೊಣ್ಣೆಯನ್ನು ಹಿಡಿದು ನಡೆದೆವು. ಆಗಲೆ ಎಷ್ಟೋ ಜನ ಹೋಗುತ್ತಿದ್ದರು. ಹೋಗುವವರಲ್ಲಿ ಹಲವು ವಿಧದ ಯಾತ್ರಿಕರನ್ನು ನೋಡ ಬಹುದು. ಕೆಲವರು ನಡೆದುಕೊಂಡು ಹೋಗುವವರು. ಇಂತಹ ಗುಂಪಿನವರೇ ಹೆಚ್ಚು. ಕೆಲವರು ಕುದುರೆಯಮೇಲೆ ಹೋಗುವವರು. ಕೆಲವರನ್ನು ಒಂದು ಬುಟ್ಟಿಯಲ್ಲಿ ಕುಳ್ಳಿರಿಸಿಕೊಂಡು ಒಬ್ಬನು ಹೊತ್ತುಕೊಂಡು ಹೋಗುವನು. ಇವಕ್ಕೆ ಕಂಡಿ ಎನ್ನುತ್ತಾರೆ. ಮತ್ತೆ ಕೆಲವರು ಶ್ರೀಮಂತರಾದರೆ ದಂಡಿಯಲ್ಲಿ ಹೋಗಬಹುದು. ದಂಡಿ ಎಂದರೆ ಸಣ್ಣ ಕುರ್ಚಿಯಂತೆ ಇರುವುದು. ಅದರ ಮಧ್ಯೆ ಒಂದು ಕೋಲು ತೂರಿಸಿ ಅದನ್ನು ಇಬ್ಬರು ಮುಂದೆ, ಇಬ್ಬರು ಹಿಂದೆ ಹೊತ್ತುಕೊಂಡು ಹೋಗುವರು. ನಡೆದು ಹೋಗುವವರಲ್ಲಿ ತಮ್ಮ ಸಾಮಾನ ನ್ನೆಲ್ಲ ತಾವೇ ಹೊತ್ತುಕೊಂಡು ಹೋಗುವವರೂ ಇರುವರು. ನಾವು ಹೋಗು ವಾಗ ಸೂರ್ಯ ಹಿಂದೆ ಇದ್ದ. ಆಗಲೇ ಗುಡ್ಡದ ಹಿಂದೆ ಮರೆಯಾಗಿದ್ದ. ತಂಗಾಳಿ

ಬೀಸುತ್ತಿತ್ತು. ಮಂದಾಕಿನಿ ನದಿ ನಮ್ಮ ಎಡಗಡೆಯೇ ಹರಿಯುತ್ತಿತ್ತು. ನಡೆಯುವ ರಸ್ತೆ ಸುಮಾರು ಐದಾರು ಅಡಿಗಳ ಅಗಲ. ಯಾವಾಗಲೂ ನದೀ ತೀರದಲ್ಲೆ ಇರುವುದು. ಆದರೆ ಕೆಲವು ವೇಳೆ ನದಿ ತುಂಬಾ ಕೆಳಗೆ ಹರಿಯುತ್ತಿರುವುದು, ಮತ್ತೆ ಕೆಲವು ವೇಳೆ ಬಹಳ ಹತ್ತಿರವೇ ಹರಿಯುತ್ತಿರುವುದು. ನಾವು ಕೇದಾರನಾಥ ಸೇರುವವರೆಗೆ ಶಿವ ಶಿವ, ಹರ ಹರ, ಓಂ ಓಂ ಎಂಬಂತೆ ಶಬ್ದ ಮಾಡಿಕೊಂಡು ಹರಿವ ಮಂದಾಕಿನಿಯ ಸಪ್ಪಳ ಮಾತ್ರ ಯಾವಾಗಲೂ ಕೇಳಿಸುವುದು. ಈ ಮಂತ್ರದಿಂದ ಓತಪ್ರೋತವಾದಂತೆ ಇದೆ ಇಡೀ ವಾತಾವರಣ. ಮಧ್ಯೆ ಮಧ್ಯೆ ಮರೆತರೂ ಈ ಸಪ್ಪಳ ನಮಗೆ ಆ ಭಾವನೆ ಮರುಕೊಳಿಸುವಂತೆ ಮಾಡುವುದು.

ಐದು ಮೈಲಿ ನಡೆದಾದ ಮೇಲೆ ಜಟೋಲಿ ಎಂಬ ಹಳ್ಳಿ ಸಿಕ್ಕಿತು. ನಮ್ಮ ಜೊತೆಯಲ್ಲಿ ಬಂದವರಿಗೆ ಅಷ್ಟು ನಡೆದು ಅಭ್ಯಾಸವಿರಲಿಲ್ಲ. ಅದರಲ್ಲೂ ಇದೇ ಮೊದಲ ದಿನ. ಆಗಲೇ ಅವರಿಗೆ ನಡೆದು ಸಾಕಾಗಿತ್ತು. ಅದೇ ಹಳ್ಳಿಯಲ್ಲಿ ತಂಗಿ ಮಾರನೆ ದಿನ ಹೋಗೋಣ ಎಂದು ಅವರು ಸೂಚಿಸಿದರು. ಆದರೆ ಇಲ್ಲಿ ಇಳಿದುಕೊಳ್ಳುವುದಕ್ಕೆ ಸರಿಯಾದ ಸ್ಥಳವಿರಲಿಲ್ಲ. ಅದೂ ಅಲ್ಲದೆ ಅಲ್ಲಿ ನಿಂತರೆ ಮಾರನೆ ದಿನ ಅವತ್ತು ನಡೆಯುವ ದೂರದ ಜೊತೆಗೆ ಇನ್ನೂ ನಾಲ್ಕು ಮೈಲಿ ನಡೆಯಬೇಕಾಗುವುದು ಎಂದೆ. ಸಾಕಾಗಿದ್ದುದರಿಂದ ದಾರಿಯಲ್ಲಿ ಟೀ ಕುಡಿದೆವು. ಸುಮಾರು ಒಂದು ಮೈಲಿ ಎರಡು ಮೈಲಿ ದೂರದಲ್ಲಿ ಸಿಗುವ ಹಳ್ಳಿಗಳಲ್ಲೆಲ್ಲ ಅಂಗಡಿಗಳಲ್ಲಿ ಟೀ ಮಾರುವರು. ಎರಡು ಆಣೆಗೆ ಒಂದು ಉದ್ದವಾಗಿರುವ ಲೋಟ ಕೊಡುವರು. ದಾರಿಯಲ್ಲಿ ಸಿಕ್ಕಿದ ನೀರನ್ನು ಕುಡಿಯುವುದಕ್ಕಿಂತ ಇದನ್ನು ಕುಡಿಯುವುದು ಮೇಲೆಂದು ನಮಗೆ ಎಚ್ಚರಿಕೆ ಕೊಟ್ಟಿದ್ದರು. ಅದರಂತೆ ಟೀ ಕುಡಿದು ಮುಂದೆ ಹೊರಟೆವು. ಆಗಲೆ ಆರು ಗಂಟೆಮೇಲೆ ಆಗಿತ್ತು. ಆದರೂ ಅನೇಕ ಜನ ದಾರಿಯಲ್ಲಿ ನಮ್ಮಂತೆ ಹೋಗುತ್ತಿದ್ದರು. ಇಲ್ಲೇ ತಂಗುವ ಎಂದು ಹೇಳಿದವರಿಗೆ ಮುಂದೆ ನಡೆಯಲು ಇಚ್ಛೆ ಇಲ್ಲ. ಆದರೆ ಬಲವಂತದಿಂದ ನಡೆಯಲೇಬೇಕಾಗಿಬಂದುದರಿಂದ ಸ್ವಲ್ಪ ಅಸಮಾಧಾನ. ಅದನ್ನು ವ್ಯಕ್ತಗೊಳಿಸಲು ಒಂದು ಸಮಯವನ್ನು ಕಾಯುತ್ತಿದ್ದರು. ಸೂರ್ಯ ಮುಳುಗಿದ. ನವಮಿ ಚಂದ್ರ ಕ್ರಮೇಣ ಕಣಿವೆಯನ್ನೆಲ್ಲ ತನ್ನ ಕಾಂತಿಯಿಂದ ತುಂಬಿದ.

ಇದ್ದಕ್ಕಿ ಇದ್ದಂತೆ ಬಿರುಗಾಳಿ ಶುರುವಾಯಿತು. ಮೋಡಗಳು ಆವರಿಸಿದುವು, ಚಂದ್ರ ಮರೆಯಾದ, ಮಿಂಚು ಥಳಥಳನೆ ಮುಂದೆ ಗೋಚರಿಸಿತು. ಜೊತೆಗೆ ಒಂದೆರಡು ಸಲ ಗುಡುಗುಗಳೂ ಬೇರೆ ಘರ್ಜಿಸಿದುವು. ಮುಂದೆ ಹೋಗಬೇಡಿ ಎಂದು ಹಟತೊಟ್ಟವರು ಇದನ್ನೇ ಕಾಯುತ್ತಿದ್ದರು. ಇದನ್ನು ನೋಡಿಬೊಡ ನೆಯೇ "ನೋಡಿ, ನಾನು ಹೇಳಲಿಲ್ಲವೆ, ಮುಂದೆ ಹೋಗಬೇಡಿ ಅಂತ, ಅದಕ್ಕೇ ಇದೆಲ್ಲ ಆಗಿದ್ದು. ಈವಾಗ ದಾರಿಯಲ್ಲಿ ಏನು ಮಾಡುತ್ತೀರೊ ನೋಡೋಣ" ಎಂದರು. "ಮಾಡೋದು ಏನು, ನೆನೆದುಕೊಂಡೇ ಹೋಗೋಣ. ಮಳೆ ಬಂದರೂ ಶಿವನ ಅನುಗ್ರಹವೆಂತಲೇ ಭಾವಿಸೋಣ. ಅನುಗಾಲ ತನ್ನ ಶಿರದಲ್ಲಿ ಗಂಗೆಯನ್ನು ಹೊತ್ತ ಶಿವ, ತನ್ನನ್ನು ನೋಡಲು ಬರುವ ಭಕ್ತರನ್ನು ಪರಿಶುದ್ಧ ಮಾಡುವುದಕ್ಕೆ ಗಂಗಾವಾರಿಯನ್ನು ಪ್ರೋಕ್ಷಣೆ ಮಾಡುತ್ತಿರುವನು ಎಂದು ತಿಳಿಯೋಣ" ಎಂದೆ. ನಮ್ಮ ಛತ್ರಿಗಳನ್ನೆಲ್ಲ ಕೂಲಿ ಗಳ ಕೈಲಿ ಕೊಟ್ಟಿದ್ದೆವು. ಅವರು ಇನ್ನೂ ಬಹಳ ಹಿಂದೆ ಇದ್ದರು. ಅವರಿಗೆ ಕಾಯುತ್ತಿದ್ದರೂ ಮಳೆಯಲ್ಲಿ ನೆನೆಯಬೇಕಾಗುವುದು. ಮುಂದೆ ಹೋದರೂ ನೆನೆಯಬೇಕಾಗುವುದು. ಹೇಗೊ ಮುಂದೆ ಹೋಗಿ ಸ್ವಲ್ಪ ದಾರಿಯನ್ನಾದರೂ ಸವೆಸೋಣ ಎಂದು ಹೊರಟೆವು.

ಜೀವನದಲ್ಲಿ ಅನಿರೀಕ್ಷಿತವಾಗಿ ಯಾವುದಾದರೂ ಘಟನೆಗಳು ಬಂದರೆ ಗೊಣಗಾಡುವೆವು. ಅವರಲ್ಲಿ ಇವರಲ್ಲಿ ತಪ್ಪು ಕಂಡುಹಿಡಿಯುವೆವು. ಮಾನವನ ಸ್ವಭಾವವೇ ಇದು. ನಾವು ಎಷ್ಟೇ ಮುಂಜಾಗ್ರತೆ ಕೈಕೊಂಡರೂ ನಾವು ಊಹಿಸದ ಹಲವಾರು ಸಮಸ್ಯೆಗಳು ನಮ್ಮನ್ನು ಎದುರಿಸುವುವು. ಇದೇ ಜೀವನ. ಭಗವಂತನ ಇಚ್ಛೆ ಇದ್ದಂತಾಗಲಿ ಎಂದು ಎಲ್ಲವನ್ನೂ ಗೊಣಗಾಡದೆ ಎದುರಿಸಬೇಕಾದರೆ ಜೀವಿ ಬಾಳಿನ ಹಲವಾರು ಘರ್ಷಣೆಗಳಿಗೆ ಸಿಕ್ಕಿ ಚೆನ್ನಾಗಿ ಹದಕ್ಕೆ ಬಂದಿರಬೇಕು. ಆಗ ಮಾತ್ರ ಅದು ಸಾಧ್ಯ. ಅಂತೂ ತಮ್ಮ ಸೂಚನೆಯೇ ಮೇಲಾಗಿತ್ತು, ಅದನ್ನು ಮೀರಿ ಬಂದುದರಿಂದಲೇ ಈ ವಿಪತ್ತು ಸಂಭವಿಸಿತು ಎಂದು ಅವರು ಗೊಣಗಾಡಿಕೊಂಡು ನಡೆಯುತ್ತಿರುವಾಗ ಕ್ರಮೇಣ ಮೋಡಗಳು ಚದುರಿದುವು. ಎಲ್ಲೋ ಒಂದೆರಡು ಹನಿ ಮಾತ್ರ ಹಾಕಿತ್ತು. ಹಿಂದಿನಂತೆ ತಿಂಗಳಬೆಳಕು ಪುನಃ ಕಣಿವೆಯನ್ನೆಲ್ಲ ತುಂಬಿತು. ಮಳೆಯಲ್ಲಿ ನೆನೆದುಕೊಂಡೇ

ಹೋಗಬೇಕಾಗುವುದು ಎಂದು ಮನಸ್ಸನ್ನು ಅದಕ್ಕೆ ಅಣಿಮಾಡಿ ನಡೆಯುವ ಹೊತ್ತಿಗೆ ಆಗಲೇ ಅನಿರೀಕ್ಷಿತವಾಗಿ ಬಂದ ಆತಂಕವೆಲ್ಲ ಮಾಯವಾಯಿತು. ಮಳೆ ಮೋಡಗಳು ಎಷ್ಟು ಅನಿರೀಕ್ಷಿತವಾಗಿ ಬಂದವೋ ಅಷ್ಟೇ ಅನಿರೀಕ್ಷಿತವಾಗಿ ಚದುರಿಹೋದವು.

ಸುಮಾರು ಎಂಟುಗಂಟೆ ಹೊತ್ತಿಗೆ ರಾಮಪುರವೆಂಬ ಹಳ್ಳಿಯನ್ನು ಸೇರಿದೆವು. ನದೀ ತೀರದಲ್ಲೆ ಒಂದು ಧರ್ಮಶಾಲೆ ಇತ್ತು. ಹೆಚ್ಚು ಯಾತ್ರಿಕರು ಅಲ್ಲಿ ತಂಗಿರಲಿಲ್ಲ. ಸ್ವಲ್ಪ ಕುಳಿತು ದಣಿವಾರಿಸಿಕೊಂಡೆವು. ಮುಂದೆ ಮಂದಾಕಿನಿ ನದಿ ಹರಿಯುತ್ತಿದೆ, ಮಂಜುಳನಿನಾದದಿಂದ. ನವಮಿಯ ಚಂದ್ರ ಭಾನು ಮಂಡಲದಲ್ಲಿ ತೇಲುತ್ತಿರುವನು. ನದೀ ತೀರದಲ್ಲೆ ಇದ್ದ ಅರಳಿಕಟ್ಟೆಯ ಮೇಲೆ ಕುಳಿತು ಶಂಕರಾಚಾರ್ಯರ ಶಿವಸ್ತೋತ್ರವೊಂದನ್ನು ಮನನ ಮಾಡತೊಡಗಿದೆ.

ನಾಗೇಂದ್ರಹಾರಾಯ ತ್ರಿಲೋಚನಾಯ
ಭಸ್ಮಾಂಗರಾಗಾಯ ಮಹೇಶ್ವರಾಯ
ನಿತ್ಯಾಯ ಶುದ್ಧಾಯ ದಿಗಂಬರಾಯ
ತಸ್ಮೈ ನಕಾರಾಯ ನಮಃ ಶಿವಾಯ ॥ ೧ ॥
ಮಂದಾಕಿನೀ ಸಲಿಲ ಚಂದನ ಚರ್ಚಿತಾಯ
ನಂದೀಶ್ವರಪ್ರಮಥನಾಥ ಮಹೇಶ್ವರಾಯ
ಮಂದಾರಮುಖ್ಯ ಬಹುಪುಷ್ಪಸುಪೂಜಿತಾಯ
ತಸ್ಮೈ ಮಕಾರಾಯ ನಮಃ ಶಿವಾಯ ॥ ೨ ॥
ಶಿವಾಯ ಗೌರೀವದನಾಬ್ಜ ಬೃಂದ
ಸೂರ್ಯಾಯ ದಕ್ಷಾಧ್ವರನಾಶಕಾಯ
ಶ್ರೀ ನೀಲಕಂಠಾಯ ವೃಷಧ್ವಜಾಯ
ತಸ್ಮೈ ಶಿಕಾರಾಯ ನಮಃ ಶಿವಾಯ ॥ ೩ ॥
ವಸಿಷ್ಠ ಕುಂಭೋದ್ಭವ ಗೌತಮಾರ್ಯ
ಮುನೀಂದ್ರ ದೇವಾರ್ಚಿತಶೇಖರಾಯ
ಚಂದ್ರಾರ್ಕ ವೈಶ್ವಾನರ ಲೋಚನಾಯ
ತಸ್ಮೈ ವಕಾರಾಯ ನಮಃ ಶಿವಾಯ ॥ ೪ ॥

ಯಜ್ಞಸ್ವರೂಪಾಯ ಜಟಾಧರಾಯ
ಪಿನಾಕಹಸ್ತಾಯ ಸನಾತನಾಯ
ದಿವ್ಯಾಯ ದೇವಾಯ ದಿಗಂಬರಾಯ
ತಸ್ಮೈಯಕಾರಾಯ ನಮಃ ಶಿವಾಯ || ೫ ||

ನಾಗೇಂದ್ರನನ್ನೆ ಹಾರವಾಗುಳ್ಳ, ತ್ರಿಲೋಚನನಾದ, ಭಸ್ಮಭೂಷಿತನಾದ, ಮಹೇಶ್ವರನಾದ, ದಶದಿಕ್ಕುಗಳನ್ನೆ ವಸನ ಮಾಡಿಕೊಂಡ, ನಿತ್ಯನೂ ಶುದ್ಧನೂ ಆದ "ನ" ಎಂಬ ಶಿವಪಂಚಾಕ್ಷರಿಯ ಪ್ರಥಮ ಅಕ್ಷರವಾಗಿರುವ ಶಿವನಿಗೆ ನಮಸ್ಕಾರ.

ಮಂದಾಕಿನೀ ನದಿಯಿಂದ ಸ್ನಾನ ಮಾಡಿ ಚಂದನಭೂಷಿತನಾದ, ನಂದೀಶ್ವರ ಮುಂತಾದ ಪ್ರಮಥ ಗಣಗಳಿಂದ ಕೂಡಿದ, ಮಂದಾರಾದಿ ಪುಷ್ಪಗಳಿಂದ ಅಲಂಕೃತನಾದ, "ಮ" ಎಂಬ ಪಂಚಾಕ್ಷರಿಯ ಎರಡನೆ ಅಕ್ಷರವಾದ ಶಿವನಿಗೆ ನಮಸ್ಕಾರ.

ಗೌರಿಯ ವದನವೆಂಬ ತಾವರೆಯ ಮೊಗ್ಗನ್ನು ಅರಳಿಸುವ ಬಾಲಸೂರ್ಯನಂತಿರುವ, ದಕ್ಷನ ಯಜ್ಞವನ್ನು ನಾಶಮಾಡಿದ, ನೀಲಕಂಠನಾಗಿರುವ, ವೃಷಭವಾಹನನಾದ "ಶಿ" ಎಂಬ ಪಂಚಾಕ್ಷರಿಯ ಮೂರನೆ ಅಕ್ಷರವಾದ ಶಿವನಿಗೆ ನಮಸ್ಕಾರ.

ವಸಿಷ್ಠ ಅಗಸ್ತ್ಯ ಗೌತಮಾದಿ ಋಷಿಶ್ರೇಷ್ಠರು ಯಾರನ್ನು ದೇವೇಶನೆಂದು ಪೂಜಿಸುವರೊ, ಯಾರು ಸೂರ್ಯ ಚಂದ್ರ ಅಗ್ನಿಗಳನ್ನು ತನ್ನ ತ್ರಿನಯನಗಳನ್ನಾಗಿ ಮಾಡಿಕೊಂಡಿರುವನೋ, ಅಂತಹ "ವ" ಎಂಬ ಪಂಚಾಕ್ಷರಿಯ ನಾಲ್ಕನೆ ಅಕ್ಷರವಾದ ಶಿವನಿಗೆ ನಮಸ್ಕಾರ.

ಯಾರು ಯಜ್ಞಸ್ವರೂಪನೊ, ಜಟಾಧಾರಿಯೊ, ಪಿನಾಕಹಸ್ತನೊ, ಅಂತಹ ದಿವ್ಯನೂ ದೇವನೂ ದಿಗಂಬರನೂ ಆಗಿರುವ "ಯ" ಎಂಬ ಪಂಚಾಕ್ಷರಿಯ ಕೊನೆಯ ಅಕ್ಷರವಾದ ಶಿವನಿಗೆ ನಮಸ್ಕಾರ.

* * * * *

ಸ್ವಲ್ಪ ಹೊತ್ತಾದ ಮೇಲೆ ಊಟ ಮಾಡಿ ಮಲಗಿಕೊಂಡೆವು. ಕೈಕಾಲು ಚೆನ್ನಾಗಿ ನೋಯುತ್ತಿತ್ತು. ಕೇದಾರನಾಥದೆಡೆಗೆ ಇರುವ ದೂರದಲ್ಲಿ ೭॥ ಮೈಲಿ ಕಳೆದು ಮೊದಲ ದಿನದ ಪ್ರಯಾಣವನ್ನು ಕೊನೆಗಾಣಿಸಿ ಸ್ವಪ್ನಸ್ಥರಾದೆವು.

೬

# ಚಂದ್ರಪುರಿ

ಬೆಳಗಿನ ಝಾವ ನಾಲ್ಕುಗಂಟೆಗೆ ಎದ್ದೆವು. ಅಲ್ಲಿ ನಾಲ್ಕು ಗಂಟೆ ಎಂದರೆ ಮೈಸೂರು ಕಡೆಯ ೫|| ಗಂಟೆಯಂತೆ. ಆಗಲೆ ಬೆಳಕು ಹರಿಯುತ್ತಿರುತ್ತದೆ. ನಮ್ಮ ನಿತ್ಯಕರ್ಮವನ್ನು ಪೂರೈಸಿಕೊಂಡು ಹೊರಡಲು ಅಣಿಯಾಗುವ ಹೊತ್ತಿಗೆ ಐದು ಗಂಟೆ ಆಗುತ್ತಿತ್ತು. ಹೋಗುವುದಕ್ಕೆ ಮುಂಚೆ ಟೀ ಕುಡಿಯುವುದು ರೂಢಿಯಾಯಿತು. ಬಿಸಿಬಿಸಿಯಾಗಿರುವ ಒಂದು ಉದ್ದನೆ ಲೋಟ ಟೀ ಕೊಡುವರು. ಸುಮಾರು ೧|| ಪಾವು ಇರಬಹುದು. ಟೀ ಕುಡಿಯುವ ಅಭ್ಯಾಸ ವಿಲ್ಲದವರು ಹಾಲನ್ನು ಕುಡಿಯಬಹುದು. ಒಂದು ಪಾವಿಗೆ ಎರಡು ಆಣೆಯಿಂದ ಮೇಲೆ ಮೇಲೆ ಹೋದಂತೆ ಮೂರಾಣೆ ನಾಲ್ಕಾಣೆಗಳವರೆಗೂ ಹೋಗುವುದು. ಬಿಸಿಬಿಸಿ ಹಾಲಿಗೆ ಸಕ್ಕರೆ ಬೆರಸಿ ಕೊಡುವರು. ಆ ಜನರು ಇನ್ನೂ ಹಾಲಿಗೆ ನೀರನ್ನು ಬೆರೆಸುವ ಕಲಾಕೌಶಲವನ್ನು ಕಲಿತಿಲ್ಲ ಎಂದು ಕಾಣುವುದು. ಬಹಳ ಅಂಜುವರು, ಪಾಪ ಭೀರುಗಳು. ಯಾರನ್ನೊ “ಹಾಲಿಗೆ ನೀರು ಬೆರಸುತ್ತೀಯ ? ಎಂದು ಕೇಳಿದಾಗ ಆತ ಕೋಪದಿಂದ “ಏನು, ನಮಗೆ ಮಕ್ಕಳಿವೆ, ಅವೆಲ್ಲ ಸಾಯಲಿ ಎಂದು ಹೇಳುತ್ತೀರ ?” ಎಂದ. ಹಾಲಿಗೆ ನೀರು ಹಾಕಿದರೆ ಮಕ್ಕಳು ಸಾಯುವರು, ವಂಶ ಉದ್ಧಾರವಾಗುವುದಿಲ್ಲ ಎಂಬ ಅಂಜಿಕೆ ಅವರನ್ನು ಮೆಟ್ಟಿ ಕೊಂಡಿದೆ. ಹಾಲಿಗೆ ನೀರುಹಾಕಿ ಮಾರುವುದು ಸಮಾಜಕ್ಕೆ ಪಾಪ ಮಾಡಿದಂತೆ, ಹಾಗೆ ವ್ಯಕ್ತಿ ಮಾಡಕೂಡದು. ಎಂಬ ಪೌರನೀತಿಯನ್ನು ಅವರು ಅರಿತಿಲ್ಲ. ಆದರೆ, ತಮಗೆ ಅದು ಶ್ರೇಯಸ್ಕರವಲ್ಲ ಎಂಬುದನ್ನು ಮೂಢ ನಂಬಿಕೆಯ

ಬಲದಿಂದ ಕಲಿತಿರುವರು. ಅಲ್ಲಿ ಅಷ್ಟೊಂದು ಯಾತ್ರಿಕರು ಬಂದು ಹೋಗುತ್ತಿರುವರು. ಕೆಲವು ವೇಳೆ ನಮಗೆ ಸಾಕಾದಷ್ಟು ಹಾಲು ದೊರೆಯುವುದಿಲ್ಲ. ಈತ ಸ್ವಲ್ಪ ನೀರು ಬೆರಸಿಕೊಟ್ಟರೂ ನಾವು ತೆಗೆದುಕೊಳ್ಳಲೇ ಬೇಕಾಗುವುದು. ಆದರೆ ಅಲ್ಲಿಯ ಜನ ಹಾಗೆ ಮಾಡುವುದಿಲ್ಲ. ಕೆಲವುವೇಳೆ ದುಡ್ಡು ಜಾಸ್ತಿ ಹೇಳುವರೆ ವಿನಃ ಇರುವ ಹಾಲನ್ನು ಎಂದಿಗೂ ಜಾಸ್ತಿ ಮಾಡುವುದಿಲ್ಲ. ಇದೊಂದು ಒಳ್ಳೆಯ ಶೀಲ ಆ ಬೆಟ್ಟದ ಜನರಲ್ಲಿ.

ಅಲ್ಲಿಂದ ಸುಮಾರು ನಾಲ್ಕು ಮೈಲಿ ನಡೆದಾದ ಮೇಲೆ ಅಗಸ್ತ್ಯಮುನಿ ಸಿಕ್ಕಿತು. ಹಿಂದಿನ ಕಾಲದಲ್ಲಿ ಅಗಸ್ತ್ಯ ಋಷಿಗಳು ಇಲ್ಲಿ ತಪಸ್ಸು ಮಾಡಿದರಂತೆ. ಶ್ರೀ ರಾಮಚಂದ್ರ ಕೂಡ ಇಲ್ಲಿಗೆ ಬಂದಿದ್ದನಂತೆ. ಈಗ ಇಲ್ಲಿ ಎರಡು ಗುಡಿಗಳಿವೆ. ಪುಟ್ಟವು, ಮುದ್ದಾಗಿವೆ. ಒಂದು ಅಗಸ್ತ್ಯೇಶ್ವರ, ಮತ್ತೊಂದು ರಾಮಚಂದ್ರ. ಹಿಮಾಲಯದಲ್ಲಿ ಶಿವ ವಿಷ್ಣುಗಳು ಪಕ್ಕಪಕ್ಕದಲ್ಲೇ ವಾಸಿಸುತ್ತಿರುವರು. ಯಾವ ವೈಷಮ್ಯವೂ ಕಾಣುವುದಿಲ್ಲ.

ನಾವು ಅಷ್ಟುಹೊತ್ತಿಗೆ ಆಗಲೆ ಹಸಿದಿದ್ದೆವು. ಬೆಳಿಗ್ಗೆ ಕುಡಿದ ಒಂದು ಲೋಟ ಟೀ ಎಂದೊ ಕರಗಿಹೋಗಿತ್ತು. ಅಲ್ಲೆ ಅಂಗಡಿಯಲ್ಲಿ ಏನನ್ನಾದರೂ, ಆಗಲೇ ಮಾಡಿ ಇಟ್ಟಿರುವುದನ್ನು, ತೆಗೆದುಕೊಳ್ಳುವುದಕ್ಕೆ ಆಗುತ್ತಿರಲಿಲ್ಲ. ನೊಣಗಳು ಅಂಗಡಿಯಲ್ಲಿ ಇರುವ ವಸ್ತುಗಳನ್ನೆಲ್ಲ ಆವರಿಸಿರುವುವು. ಮುನಿಸಿಪಾಲಿಟಿಯವರು ಬೇರೆ ಅಂಗಡಿಯಲ್ಲಿ ಏನನ್ನೂ ತೆಗೆದುಕೊಂಡು ತಿನ್ನಬೇಡಿ ಎಂದು ಕಂಡ ಕಂಡ ಕಡೆಯಲ್ಲೆಲ್ಲ ಬೋರ್ಡ್ ಬರೆದು ಹಾಕಿದ್ದರು. ಆದರೆ ಹೊಟ್ಟೆ ಕೇಳಬೇಕಲ್ಲ. ಒಂದು ಅಂಗಡಿಗೆ ಹೋಗಿ ಅಲ್ಲಿ ಬಿಸಿಯಾಗಿ ಪೂರಿ ಮಾಡಿಕೊಡುವೆಯ ? ಎಂದು ಕೇಳಿದಾಗ ಅವನು ಒಪ್ಪಿಕೊಂಡ. ಹಿಟ್ಟನ್ನು ಕಲಸಿ ತುಪ್ಪ ಒಲೆಯ ಮೇಲಿಟ್ಟು ಕರಿದು ಕೊಡಬೇಕಾದರೆ ನಮ್ಮಲ್ಲಿ ಇಬ್ಬರು ಅವನ ಸಹಾಯಕ್ಕೆ ನಿಲ್ಲಬೇಕಾಯಿತು. ಒಬ್ಬರು ಪೂರಿ ಲಟ್ಟಿಸಿ ಇಟ್ಟಾಗ ನೊಣ ಅದರ ಮೇಲೆ ಬೀಳದಂತೆ ಬೀಸುತ್ತಿರುವುದಕ್ಕೆ. ಮತ್ತೊಬ್ಬರು ಪೂರಿಯನ್ನು ಕರಿದು ಹಾಕಿದ ಮೇಲೆ ಅದಕ್ಕೆ ನೊಣ ಮುತ್ತದಂತೆ ನೋಡಿಕೊಳ್ಳುವುದಕ್ಕೆ. ಅಂಗಡಿಯವನು ಪೂರಿಯೊಂದಿಗೆ ಆಲುಗೆಡ್ಡೆ ಬೇಯಿಸಿ ಪಲ್ಯ ಮಾಡಿಕೊಟ್ಟ.

ಈ ಕೆಲಸಕ್ಕೆ ಸುಮಾರು ಒಂದು ಗಂಟೆ ಹಿಡಿಯಿತು. ಹಿಮಾಲಯ ಪ್ರಾಂತ್ಯದಲ್ಲಿ ನೊಣದ ಅವಾಂತರ ಹೇಳತೀರದು. ಹರಿದ್ವಾರದಿಂದಲೇ ಅವು ಪ್ರಾರಂಭ ವಾಗುವುವು. ಕೇದಾರನಾಥಕ್ಕೆ ಇನ್ನೂ ನಾಲ್ಕೈದು ಮೈಲಿ ದೂರವಿರುವವರೆಗೆ ಅವು ಇರುವುವು. ಶಿವನ ಅನುಗ್ರಹ ಅವುಗಳ ಮೇಲೆ ಪ್ರಬಲವಾಗಿದೆ. ಹಗಲು ಹೊತ್ತು ನಾವು ಊಟ ಮಾಡಬೇಕಾದರೂ ಒಂದು ಕೈಯಲ್ಲಿ ನೊಣ ಹೊಡೆ ಯುತ್ತ ಊಟ ಮಾಡಬೇಕು. ಏನೂ ಕೆಲಸವಿಲ್ಲದೆ ಇದ್ದರೆ ನೊಣ ಹೊಡೆ ಯುವ ಕೆಲಸ ಮಾಡುತ್ತಿರುವನು ಎಂದು ನಾವು ಹಾಸ್ಯಕ್ಕೆ ಹೇಳುವೆವು. ಆದರೆ ನೊಣ ಹೊಡೆಯುವ ಕೆಲಸ ಅಷ್ಟು ಸುಲಭದ ಕೆಲಸವಲ್ಲ, ಮತ್ತು ಅಷ್ಟು ಲಘು ವಾದ ಕೆಲಸವೂ ಅಲ್ಲ; ಬಹಳ ಜವಾಬ್ದಾರಿಯ ಕೆಲಸವೆಂಬುದು ನನಗೆ ಆಗ ಅನುಭವವಾಯಿತು. ಮಧ್ಯಾಹ್ನದ ಹೊತ್ತು ನಾವು ವಿಶ್ರಮಿಸಿಕೊಳ್ಳುವಾಗ ನಮ್ಮ ಕೈಕಾಲಿನ ಮೇಲೆ ಹೊದಿಕೆ ಇಲ್ಲದೆ ಇತ್ತು ಎಂದರೆ ಅವು ಬಂದು ಮುತ್ತು ವುವು. ಅವೆಲ್ಲ ಕುಳಿತಾಗ ಕಾಲು ಭಾರವಾಗುವುದು. ನೊಣಕ್ಕೆ ತೂಕ ಇದೆ ಎಂದು ಅರಿವಾಗಿದ್ದು ಕೂಡ ನನಗೆ ಇದೇ ಪ್ರಥಮ. ಅವೋ ಚೆನ್ನಾಗಿ ಉಂಡು ತಿಂದು ಧಾಂಡಿಗನಂತೆ ಬೆಳೆದಿವೆ. ಆ ನೊಣಗಳ ಎದುರಿಗೆ ಮುನಿಸಿಪಾಲಿಟಿ ಯವರು ದಪ್ಪ ಅಕ್ಷರಗಳಲ್ಲಿ ಡಿ.ಡಿ.ಟಿ. ಸ್ಪ್ರೇ ಮಾಡಿದ ತಾರೀಖು ಹಾಕಿರುವರು. ಆ ತಾರೀಖು ಇನ್ನೂ ಎಂಟು ಹತ್ತು ದಿವಸ ಕೂಡ ಆಗಿಲ್ಲ ಸ್ಪ್ರೆಮಾಡಿ ಎಂಬುದನ್ನು ತೋರಿಸುವುದು. ಇವರು ಸ್ಪ್ರೆಮಾಡಿರುವ ಡಿ. ಡಿ .ಟಿ. ಪ್ರಯೋಗ ಅಷ್ಟು ಚಂದವೊ, ಅಥವಾ ಶಿವಾನುಗ್ರಹದಿಂದ ಬೆಳೆದ ನೊಣಗಳಿಗೆ ಇವಾವುವೂ ಲಕ್ಷ್ಯವಿಲ್ಲವೊ! ನಂಜನ್ನು ಉಂಡು ಬದುಕಿರುವ ಶಿವನ ಅನುಗ್ರಹ ಪಡೆದರೆ ಡಿ.ಡಿ.ಟಿ. ತಿಂದು ಅರಗಿಸಿಕೊಳ್ಳಲಾರವೆ ಈ ನೊಣಗಳು!

ಅಗಸ್ತ್ಯಮುನಿ ಸಮೀಪದಲ್ಲಿ ಒಂದು ಹೈಸ್ಕೂಲನ್ನು ತೆರೆದಿರುವರು. ನಾವು ತಿಂಡಿ ತಿಂದು ಹೋಗುವ ಹೊತ್ತಿಗೆ ಆ ಹೈಸ್ಕೂಲಿನ ಬೆಲ್ಲಾಯಿತು. ತಂಡತಂಡ ವಾಗಿ ಹುಡುಗರು ಶಾಲೆಗೆ ಹೋಗುತ್ತಿದ್ದರು. ಇದೊಂದೇ ಹೈಸ್ಕೂಲಂತೆ, ರುದ್ರ ಪ್ರಯಾಗವನ್ನು ಬಿಟ್ಟರೆ ಅಲ್ಲಿಂದ ಕೇದಾರನಾಥದವರೆಗೆ. ದಾರಿಯಲ್ಲಿ ದೊಡ್ಡ ದೊಂದು ಬೋರ್ಡನ್ನು ಹಾಕಿ, ಶಾಲೆಗೆ ಸಹಾಯಮಾಡಿ, ಹಿಂದುಳಿದ ಜನರಿಗೆ ವಿದ್ಯಾದಾನ ಮಾಡಿದ ಪುಣ್ಯ ಕಟ್ಟಿಕೊಳ್ಳಿ, ಎಂದು ಬರೆದಿದ್ದರು. ಅನೇಕ ಜನ

ಯಾತ್ರಿಕರು ಆ ಮಾರ್ಗದಲ್ಲಿ ಹೋಗುವಾಗ ಯಾರಾದರೂ ಸ್ವಲ್ಪ ಹಣವನ್ನು ಕೊಟ್ಟಿರುತ್ತಾರೆ. ಇದೊಂದು ಅವರಿಗೆ ಬಹಳ ಮುಖ್ಯವಾದ ಉತ್ಪತ್ತಿ.

ಅಗಸ್ತ್ಯಮುನಿಯಿಂದ ಸುಮಾರು ಐದು ಮೈಲಿ ನಡೆದ ಮೇಲೆ ಚಂದ್ರಪುರಿ ಎಂಬ ಗ್ರಾಮ ಸಿಕ್ಕುವುದು. ಇದೊಂದು ಸಂಗಮ ಸ್ಥಳ. ಚಂದ್ರಾನದಿ ಮಂದಾಕಿನಿಯನ್ನು ಸೇರುವುದು. ಇಲ್ಲಿ ಇಳಿದುಕೊಳ್ಳುವುದಕ್ಕೆ ಸ್ಥಳ ಚೆನ್ನಾಗಿತ್ತು. ಅಂಗಡಿಯವರು ಕೆಳಗೆ ಅಂಗಡಿ ಇಟ್ಟುಕೊಂಡು ಮೇಲೆ ಯಾತ್ರಿಕರಿಗೆ ತಂಗುವುದಕ್ಕೆ ಸ್ಥಳ ಕೊಡುವರು. ಅನೇಕವೇಳೆ ಇಂತಹ ಸ್ಥಳಗಳು ದಾರಿಯಲ್ಲಿ ಸಿಕ್ಕುವ ಧರ್ಮಶಾಲೆಗಳಿಗಿಂತ ಮೇಲು. ಸ್ಥಳ ಚೆನ್ನಾಗಿ ಗುಡಿಸಿ ಶುಭ್ರವಾಗಿಟ್ಟಿರುವರು. ಯಾರು ಅಲ್ಲಿಳಿಯುವರೋ ಅವರು ಆ ಅಂಗಡಿಯವನಿಂದಲೇ ಸಾಮಾನನ್ನು ಕೊಳ್ಳಬೇಕು. ಅವನು ನಮಗೆ ಬೇಕಾದ ಪಾತ್ರೆ ಕೊಡುವನು. ಪಾತ್ರೆಗೆ, ವಸತಿಗೆ ಬೇರೆ ಛಾರ್ಜು ಮಾಡದೆ ಇದ್ದರೂ ನಮಗೆ ಕೊಡುವ ಸಾಮಾನಿನಲ್ಲಿ ಇದನ್ನೆಲ್ಲ ಸೇರಿಸಿಬಿಡುವನು. ಏನಾದರೂ ಆಗಲಿ ಇದೊಂದು ದೊಡ್ಡ ಸೌಕರ್ಯ ದಾರಿಯಲ್ಲಿ. ಪಾತ್ರೆ ಅಕ್ಕಿ ಬೇಳೆ ಇವನ್ನೆಲ್ಲ ನಾವು ಹೊತ್ತುಕೊಂಡು ಹೋಗಬೇಕಾದರೆ ಅದಕ್ಕೇ ಒಬ್ಬ ಕೂಲಿಯವನನ್ನು ನೇಮಿಸಬೇಕಾಗಿತ್ತು.

ನಾವು ತಂಗಿದ ಅಂಗಡಿಯಲ್ಲಿ ಎಲ್ಲ ಸಾಮಾನುಗಳೂ ದೊರೆಯುತ್ತಿದ್ದುವು. ಆಶ್ಚರ್ಯವೇನು ಎಂದರೆ ಹುಣಸೇಹಣ್ಣು ಕೂಡ ಇತ್ತು. ದಕ್ಷಿಣ ದೇಶದಿಂದ ಬರುವ ಯಾತ್ರಿಕರಿಗೆ ಎಂದು ಅದನ್ನು ತರಿಸಿ ಇಟ್ಟಿದ್ದರು. ನಮ್ಮ ಕಡೆಯವರಿಗೆ ಇದುವರೆಗೆ ಖರ್ಚಾದ ಹುಣಸೇ ಹಣ್ಣನ್ನು ಭರ್ತಿ ಮಾಡಲು ಅವಕಾಶವಾಯಿತು. ಇನ್ನೂ ಕೆಲವು ಸಾಮಾನುಗಳನ್ನು ಅಲ್ಲಿ ಕೊಂಡೆವು.

ನಾಲ್ಕು ಗಂಟೆಯಾಗಿತ್ತು. ಆಗ ಸ್ವಲ್ಪ ಸೋನೆ ಮಳೆ ಪ್ರಾರಂಭವಾಯಿತು. ನಾವು ಕುಳಿತಿದ್ದಾಗ ಯಾರೊ ತೆಲುಗು ಮುದುಕಿಯೊಬ್ಬಳು ಇಲ್ಲಿ ಯಾರಾದರೂ ಮದ್ರಾಸಿನ ಕಡೆಯವರು ಇರುವರೆ ಎಂದು ಕೇಳಿದಳು. ಇಲ್ಲಿ ಮದ್ರಾಸಿನ ಕಡೆಯವರು ಎಂದರೆ ದಾಕ್ಷಿಣಾತ್ಯರಿಗೆಲ್ಲ ಇದು ಅನ್ವಯಿಸುವುದು. ಪಂಚದ್ರಾವಿಡ ಭಾಷೆಗಳೆಲ್ಲ ಅದರಲ್ಲಿ ಅಡಗಿವೆ. ಆಕೆಯನ್ನು ನೀವು ಯಾವ

ಕಡೆಯಿಂದ ಬರುತ್ತೀರಿ ಎಂದು ಕೇಳಿದಾಗ ನೆಲ್ಲೂರು ಕಡೆಯಿಂದ ಎಂದು ಹೇಳಿದಳು. ನಮ್ಮಲ್ಲಿ ತೆಲುಗು ಮಾತನಾಡುವವರೇ ಒಬ್ಬರು ಇದ್ದರು. ಆಕೆಯ ಸಮಾಚಾರವನ್ನೆಲ್ಲ ಕೇಳಿದರು. ಆಕೆ ಒಬ್ಬ ಕೂಲಿಯನ್ನು ನೇಮಿಸಿಕೊಂಡು ಬಂದಿದ್ದಳು. ಸಾಮಾನನ್ನೆಲ್ಲ ಅವನ ಮೇಲೆ ಹೊರಿಸಿ ನಡೆಯುತ್ತಿದ್ದಾಗ ಕೂಲಿಯವನು ಮುಂದೆ ಮುಂದೆ ಹೋಗಿ ಸಿಕ್ಕಿದ ಒಂದು ಗ್ರಾಮದಲ್ಲಿ, ಸಂಜೆ ಆ ಮುದುಕಿ ಇಲ್ಲೇ ತಂಗುವಳು ಎಂದು ಭಾವಿಸಿ, ಆತ ಒಂದು ಅಂಗಡಿಯಲ್ಲಿ ಕುಳಿತಿದ್ದಾಗ, ಈಕೆ ಅಲ್ಲಿ ನಿಲ್ಲದೆ ತನ್ನ ಕೂಲಿಯವನನ್ನು ಗಮನಿಸದೆ ಮುಂದೆ ಹೋದಳು. ಕೂಲಿಯವನು ಮುಂದೆ ಹೋಗುತ್ತಿರುವನು ಎಂದು ಬಗೆದು ಬಂದಳು. ಆದರೆ ಆತ ಸಿಕ್ಕಲಿಲ್ಲ. ಎಲ್ಲೊ ತನ್ನ ಸಾಮಾನನ್ನೆಲ್ಲ ಹೊತ್ತುಕೊಂಡು ಹೊರಟುಹೋಗಿರುವನೇನೋ ಎಂಬ ಭಯ. ಆಕೆಯನ್ನು ಆ ಕೂಲಿಯ ಹೆಸರೇನು ಎಂದು ಕೇಳಿದಾಗ ಆಕೆಗೆ ಅದು ಗೊತ್ತಿರಲಿಲ್ಲ. ಅವನಿಗೆ ದುಡ್ಡು ಕೊಟ್ಟ ಲೈಸೆನ್ಸ್ ಕೂಡ ಆಕೆಯ ಹತ್ತಿರ ಇರಲಿಲ್ಲ. ಆಕೆಯ ಹಾಸಿಗೆ ಬಟ್ಟೆ ಎಲ್ಲ ಅವನ ಹತ್ತಿರವೇ ಸೇರಿಹೋಗಿತ್ತು. ತಾನೆ ಅಡಿಗೆ ಮಾಡಿಕೊಂಡಲ್ಲದೆ ಆಕೆ ನಮ್ಮಿಂದ ಊಟ ಮಾಡುವಂತಿಲ್ಲ. ಬಾಯಾರಿದಾಗ ನಾವು ನೀರು ಕೊಟ್ಟರೆ ಆಕೆ ನೀರನ್ನೂ ಕುಡಿಯಲೊಲ್ಲಳು. ಆ ನೀರಿಗೆ ಸ್ವಲ್ಪ ಹಾಲು ಬೆರಸಿ ಅದನ್ನು ಕುಡಿದರೆಮಾತ್ರ ಆಕೆಯ ಜಾತಿ ಉಳಿಯುವುದು. ಹಾಲಿಗೆ ದೋಷವಿಲ್ಲವಂತೆ. ನೀರಿಗೆ ಮಾತ್ರ ದೋಷವಂತೆ! ಈ ಆಚಾರವನ್ನು ಕಾಪಾಡಿಕೊಂಡು ಬಂದರೆ ದೊಡ್ಡ ಧಾರ್ಮಿಕ ವ್ಯಕ್ತಿಗಳು ತಾವು ಎಂದು ಭಾವಿಸುವರು. ಶತಶತಮಾನಗಳಿಂದ ಬಂದಿರುವ ಈ ಅಭ್ಯಾಸದ ಗೋಜಿಗೆ ಹೋಗದೆ ಆಕೆಗೆ ಸಮಾಧಾನ ಹೇಳಿದೆವು: "ಇಲ್ಲಿಯ ಜನ ಹಾಗೆ ಮೋಸ ಮಾಡುವವರಲ್ಲ. ಎಲ್ಲೋ ಆತ ನಿಮಗಿಂತ ಮುಂದೆ ಹೋಗಿ ಮುಂದಿನ ನಿಲ್ದಾಣದಲ್ಲಿ ಕಾದುಕೊಂಡಿರಬಹುದು. ಸಿಕ್ಕುತ್ತಾನೆ, ಹಾಗೆ ಸಿಕ್ಕದೆ ಹೋದರೆ ಪೋಲೀಸಿನವರಿಗೆ ದೂರು ಕೊಡೋಣ" ಎಂದು ಹೇಳಿದೆವು. ಆಕೆ ಮೊದಲು ಕೂಲಿಯವನನ್ನು ದೂರಿದಳು. ಸ್ವಲ್ಪ ಹೊತ್ತಾದ ಮೇಲೆ ತನ್ನ ಕರ್ಮವನ್ನು ಹಳಿದುಕೊಂಡಳು. "ನನ್ನ ದುಷ್ಕರ್ಮದಿಂದ ಇದಾಯಿತು. ಒಂದುವೇಳೆ ಅವನಿಗೆ ದೇವರು ದುರ್ಬುದ್ಧಿ ಕೊಟ್ಟು ಓಡಿಹೋಗುವಂತೆ ಮಾಡಿದ್ದರೂ ಹಾಗೆ ಮಾಡಬೇಕಾದರೆ ನಾನೇನೋ ಪಾಪ

ಮಾಡಿರಬೇಕು. ಅದಕ್ಕೇ ಅದೆಲ್ಲ ತೀರ್ಥಯಾತ್ರೆಗೆ ಹೊರಟಾಗ ಆದದ್ದು" ಎಂದು ಸಮಾಧಾನ ಹೇಳಿಕೊಂಡಳು. ಇದು ಎಲ್ಲಾ ಹಿಂದೂಗಳ ಒಂದು ಸ್ವಭಾವ. ಮೊದಲು ಎಲ್ಲರ ಮೇಲೂ ರೇಗಿ ಬಾಯಿಗೆ ಬಂದಂತೆ ಅಂದಾದ ಮೇಲೆ, ಶಾಂತರಾದಾಗ ನಮ್ಮನ್ನು ನಾವೇ ವಿಭಜನೆ ಮಾಡಿಕೊಂಡು ಜೀವನ ದಲ್ಲಿ ಏನಾದರೂ ಅದಕ್ಕೆ ನಾವೇ ಕಾರಣಕರ್ತರು ಎಂದು ಕೊನೆಯ ಸಿದ್ಧಾಂತಕ್ಕೆ ಬಂದು ನಿಲ್ಲುವೆವು. ಜೀವನದಲ್ಲಿ ಏನಾದರೂ ಒಳ್ಳೆಯದು ಸಿಕ್ಕಿದರೆ, ಅದು ಹಿಂದಿನ ಪ್ರತಿಫಲ ಎನ್ನುವೆವು; ಕಹಿ ಸಿಕ್ಕಿದರೆ ನಾನೇ ಹಿಂದೆ ಬಿತ್ತಿದ್ದು, ಈಗ ಅನುಭವಿಸಬೇಕಾಗಿದೆ ಎಂದು ಸಮಾಧಾನ ಹೇಳಿಕೊಳ್ಳುವೆವು. ಈ ಕರ್ಮ ಸಿದ್ಧಾಂತ ಎಲ್ಲೋ ಕೆಲವು ಪಂಡಿತರಿಗೆ ಮಾತ್ರವಲ್ಲ, ಪಾಮರರಿಗೆಲ್ಲ ಅರ್ಥ ವಾಗುವ ಸಿದ್ಧಾಂತ. ಇದೊಂದು ನಮ್ಮ ಜನತೆಯ ವೈಶಿಷ್ಟ್ಯ.

ನಾವಿದ್ದ ಕಡೆಯೆ ಇಳಿದುಕೊಳ್ಳುವುದಕ್ಕೆ ಬಂಗಾಳಿ ಬಾಬುಗಳ ದೊಡ್ಡ ದೊಂದು ಗುಂಪು ಬಂದಿತು. ಅವರಲ್ಲಿ ಇಬ್ಬರು ಕಲ್ಕತ್ತೆಯಲ್ಲಿ ತುಂಬಾ ಪ್ರಖ್ಯಾತರಾದ ಡಾಕ್ಟರು, ಒಬ್ಬ ಲಾಯರು, ಎಲ್ಲಾ ಶ್ರೀಮಂತರು. ಮೂರು ದಂಡಿ ಮಾಡಿಸಿಕೊಂಡು ಬಂದಿದ್ದರು. ಅದನ್ನು ಹೊರಲು ಒಂದೊಂದಕ್ಕೆ ಆರು ಜನ, ಸಾಮಾನು ಹೊರಲು ನಾಲ್ಕು ಜನ, ಜೊತೆಗೆ ಆಳು ಕಾಳು ಬೇರೆ ಇದ್ದರು. ನಾವಿಳಿದಿದ್ದ ಅಂಗಡಿಯ ಪಕ್ಕದಲ್ಲಿ ಇಳಿದುಕೊಂಡು ಮಧ್ಯೆ ಮಧ್ಯೆ "ಭೊಂ ಭೊಂ ಹರಹರ ಮಹದೇವ, ಜೈ ಕೇದಾರನಾಥಕಿ" ಎಂಬ ಘೋಷಣೆಗೆ ಚಾವಣಿ ಕಿತ್ತು ಬರುವಂತೆ ಇತ್ತು. ಅವರು ಅಷ್ಟೊಂದು ವಿದ್ಯಾವಂತರು, ಬುದ್ಧಿವಂತರು ಆಗಿದ್ದರೂ ಅವರಲ್ಲಿ ಯಾವ ಕೃತಕತೆಯೂ ಇರಲಿಲ್ಲ. ಕಲ್ಕತ್ತೆ ಯಲ್ಲಿದ್ದಾಗ ಬೆಳಗಿನಿಂದ ಸಾಯಂಕಾಲದವರೆಗೆ ಬಿಡುವಿಲ್ಲದೆ ಚಾಕರಿ ಮಾಡಿ ಬೇಕಾದಷ್ಟು ಹಣ ಗಳಿಸುತ್ತಿದ್ದರು. ಆದರೆ ವಿರಾಮವಿರಲಿಲ್ಲ. ಪ್ರಪಂಚದ ಜಂಜಡ ಬೇಜಾರಾಗಿ ಎಲ್ಲಾದರೂ ಸಂಪೂರ್ಣ ಇದನ್ನೆಲ್ಲ ಸ್ವಲ್ಪ ದಿನ ಮರೆಯೋಣ ಎಂದು ಬಂದಿದ್ದರು. ಅನೇಕ ಜನ ರಜ ತೆಗೆದುಕೊಂಡು ವಿಲಾಸ ಪಡುವುದಕ್ಕೆ ಹೋಗುವರು. ಇವರು ಅದನ್ನೆಲ್ಲ ಬಿಟ್ಟು ಯಾತ್ರೆಗೆ ಬಂದಿದ್ದರು. ಒಳ್ಳೆಯ ಜನ. ನಮ್ಮೊಡನೆ ಮಾತನಾಡಿದ ಮೇಲೆ ನಿಮ್ಮಲ್ಲಿ ಯಾರಿಗಾದರೂ

ಅನಾರೋಗ್ಯವಾದರೆ ನಮಗೆ ಹೇಳಿ ಎಂದರು. ಆಗಲಿ ಎಂದೆ, ಆದರೆ ಒಳಗೆ ದಯವಿಟ್ಟು ಹಾಗೆ ಆಗದಿರಲಿ ದೇವರೆ, ಎಂದುಕೊಂಡೆ.

ಸಂಜೆ ಅಲ್ಲಿ ಅಡ್ಡಾಡಿಕೊಂಡು ಬರುವುದಕ್ಕೆ ಹೋಗಿದ್ದಾಗ ನದೀ ತೀರದ ಬೈಲಿನಲ್ಲಿ ಕೆಲವು ಕೂಲಿಗಳು ಅಡಿಗೆ ಮಾಡಿಕೊಳ್ಳುತ್ತಿದ್ದುದನ್ನು ನೋಡಿದೆ. ಎಷ್ಟು ಕಡಮೆ ಸಲಕರಣೆ ಅವರ ಅಡಿಗೆಗೆ. ದಾರಿಯಲ್ಲಿ ಬಿದ್ದಿರುವ ಮೂರು ಕಲ್ಲಿಟ್ಟು ಒಲೆ ಹೊತ್ತಿಸುವರು. ಅದರ ಮೇಲೊಂದು ಕಾವಲಿ ಇಡುವರು. ಒಂದು ತಟ್ಟೆಯಲ್ಲಿ ಗೋಧಿಹಿಟ್ಟು ಕಲಸಿ ಮುದ್ದೆಮಾಡಿ ಅದನ್ನು ಕೈಯಲ್ಲೆ ಹೊರಳಾಡಿಸಿ ಹಿಗ್ಗಲಿಸಿ ಚಪಾತಿಮಾಡಿ ಕಾವಲಿಯ ಮೇಲೆ ಹಾಕುವರು. ಅದು ಬೆಂದ ನಂತರ ಒಲೆ ಒಳಗಿನ ಬೆಂಕಿಯಲ್ಲಿ ಒಂದುಸಲ ಹಾಕಿ ತೆಗೆದಿಡುವರು. ಒಂದು ಸೇರು ಗೋಧಿಹಿಟ್ಟಿಗೆ ಹನ್ನೆರಡೊ ಹದಿಮೂರೊ ರೊಟ್ಟಿ ಮಾಡುವರು. ನಮ್ಮ ಅಂಗೈ ಅಗಲ ದಪ್ಪವಾಗಿರುತ್ತದೆ ಆ ರೊಟ್ಟಿ. ಅದನ್ನು ಒಂದು ಹಸಿ ಈರುಳ್ಳಿಯೊಂದಿಗೆ ತಿಂದು ನೀರು ಕುಡಿದು ಊಟ ಪೂರೈಸುವರು. ಇವರ ಅಡಿಗೆಯೆಲ್ಲ ಮಾಡುವುದಕ್ಕೆ ಮುಕ್ಕಾಲು ಗಂಟೆ ಸಾಕು. ತಿಂದಾದ ಮೇಲೆ ಆಗಲೆ ನಡೆಯುವುದಕ್ಕೆ ಸಿದ್ಧರಾಗಿರುವರು.

ನಾನು ಬಿಡಾರದ ಕಡೆ ಬರುವ ಹೊತ್ತಿಗೆ ಆಗಲೆ ಸೂರ್ಯಾಸ್ತಮವಾಗಿ ಚಂದ್ರ ನಭದಲ್ಲಿ ತಾಂಡವಾಡುತ್ತಿದ್ದನು. ಎಡಗಡೆ ಮಂದಾಕಿನಿಯ ವಕ್ಷದ ಮೇಲೆ ಉಡುರಾಜನ ಕಾಂತಿ ಬಿದ್ದಾಗ ಪ್ರತಿಬಿಂಬಿಸುವ ಬೆಳಕು ರಜತ ಪ್ರವಾಹದಂತೆ ಮಿನುಗುತ್ತಿತ್ತು. ಮುಂದೆ ಬಹು ದೂರದಲ್ಲಿ ಕೇದಾರನಾಥ ಪರ್ವತಶ್ರೇಣಿಗೆ ಸೇರಿದ ಹಿಮಶಿಖರಗಳ ನೆತ್ತಿ ಮೊಬ್ಬು ಮೊಬ್ಬಾಗಿ ಕಾಣುತ್ತಿತ್ತು. ಹಿಂದಿನಿಂದ ಬಂಗಾಳಿಬಾಬುಗಳು ಶಿವನಾಮ ಸಂಕೀರ್ತನೆ ಮಾಡುತ್ತಿದ್ದರು.

ಸಾಂಬ ಸದಾಶಿವ ಸಾಂಬ ಸದಾಶಿವ
ಸಾಂಬ ಸದಾಶಿವ ಸಾಂಬ ಶಿವ ಹರ ||

ಪೂರ್ಣ ಪರಾತ್ಪರ ಪರಮ ಕೃಪಾರ್ಣವ
ಅಗಣಿತ ಗುಣಗಣ ಮುದಿತ ಶಿವ ಹರ |

ಅದ್ಭುತ ಮೌಲಿಕ ಚಂದ್ರಕಲಾಧರ
ಅಮರಾಧೀಶ್ವರ ಗಿರೀಶ ಶಿವ ಹರ ।
ಪುರುಷ ಪುರಾತನ ಬ್ರಹ್ಮ ಸನಾತನ
ಸ್ವಾನಂದಾಮೃತ ಮಾತ್ರ ಶಿವ ಹರ ॥
ನೀಲಕಂಠ ಶಿವ ಸಂಕಟಮೋಚಕ
ನಿಖಿಲಾಧೀಶ್ವರ ಸಕಲ ಶಿವ ಹರ ।
ಅಮಿತ ಗುಣಾರ್ಣವ ಚಂದ್ರೇಶ್ವರ ಶಿವ
ಅಚಲ ನಿವಾಸ ಸುರೇಶ ಶಿವ ಹರ ॥

೭

# ಗುಪ್ತಕಾಶಿ

ಹದಿಮೂರನೆ ತಾರೀಖು ಏಕಾದಶಿ ಬೆಳಿಗ್ಗೆ ನಾವು ಚಂದ್ರಪುರಿಯಿಂದ ಹೊರಟಾಗ ಎದುರಿಗೆ ಕೇದಾರನಾಥ ಪರ್ವತಸ್ತೋಮ ಕಾಣುತ್ತಿತ್ತು. ಇಲ್ಲಿಂದ ಹಿಡಿದು ಕೇದಾರನಾಥ ಸೇರುವವರೆಗೆ ಆ ಪರ್ವತಸ್ತೋಮದ ಯಾವುದಾದ ರೊಂದು ತುದಿ ಸದಾ ಕಾಣುತ್ತಿತ್ತು. ಇಲ್ಲಿಯವರೆಗೆ ನಮ್ಮ ದಾರಿಯ ಎಡಗಡೆ ಸದಾ ನಮ್ಮ ಸ್ನೇಹಿತೆಯಂತೆ ಇರುವ ಮಂದಾಕಿನಿ ಸಲಿಲ ಧ್ವನಿಯೊಂದೇ ಕೇಳುತ್ತಿತ್ತು. ಈಗ ಹಿಮಾಲಯದ ಶಿಖರವೂ ಕಣ್ಣಿಗೆ ಕಾಣುತ್ತಿತ್ತು. ಒಂದು ಕಡೆ ಹರ ಹರ ಎಂಬ ಧ್ವನಿ ಸೂಚಕದಂತೆ ಇರುವ ನದೀ ಪ್ರವಾಹ, ಎದುರಿಗೆ ತನ್ನ ಸೃಷ್ಟಿಯನ್ನು ನೋಡುತ್ತಿರುವ ಶಿವನ ನೆನಪನ್ನು ತರುವ ಕೇದಾರನಾಥನ ಭವ್ಯ ಶಿಖರ.

ದಾರಿಯಲ್ಲಿ ಜನ ಹೆಚ್ಚಿಲ್ಲ. ಒಬ್ಬೊಬ್ಬರೇ ಈ ಭವ್ಯ ವಾತಾವರಣದಲ್ಲಿ ನಡೆಯುತ್ತಿರುವಾಗ ಅದರಲ್ಲೂ ಹಿಮಾಲಯದಲ್ಲಿ ಗಂಗಾನದಿಯೊಡನೆ ಹೋಗು ತ್ತಿದ್ದರೆ ಮನಸ್ಸು ಸ್ವಭಾವತಃ ಅಂತರ್ಮುಖವಾಗುವುದು. ಸುರಳಿ ಸುತ್ತಿಕೊಂಡಿ ರುವ ನಮ್ಮ ಹಿಂದಿನ ಜೀವನವನ್ನೆಲ್ಲ ಬಿಚ್ಚಿ ನೋಡಿದಾಗ ಆಶ್ಚರ್ಯವಾಗುವುದು. ಜೀವನ ಪ್ರಾರಂಭವಾದಾಗ ಎಷ್ಟು ಸವಿಗನಸು ಕಟ್ಟಿಕೊಂಡಿದ್ದೆವು, ಏನೇನು ಆಗಬೇಕೆಂದುಕೊಂಡಿದ್ದೆವು. ಆದರೆ ಕೆಲವು ವರುಷಗಳಾದ ಮೇಲೆ ನಾವು ಬಗೆದುದೊಂದುಆದುದೊಂದು. ನಾವು ಯಾವುದನ್ನು ಬಾಚಿ ತಬ್ಬಿಕೊಂಡಿದ್ದೆವೊ ಅದನ್ನು ಭಗವಂತ ಕೆಲವುವೇಳೆ ಬಲಾತ್ಕಾರವಾಗಿ ಕಿತ್ತೊಗೆದ, ಕೆಲವುವೇಳೆ

ಉಪಾಯದಿಂದ ತೆಗೆದುಕೊಂಡ. ಅವನನ್ನು ಮರೆತ ನಮ್ಮನ್ನು ತನ್ನೆಡೆಗೆ ಕರೆದುಕೊಳ್ಳಲು ಹಲವು ಜೀವಿಗಳೊಡನೆ ಹಲವು ರೀತಿ ವ್ಯವಹರಿಸುವನು ದೇವರು, ಕಣ್ಣೀರಿನ ದೇವದೂತರನ್ನು ಎಷ್ಟೋವೇಳೆ ಕಳುಹಿಸಿದ, ದುಃಖದ, ಸಾವಿನ, ಸೋಲಿನ, ಬೇಹುಗಾರರನ್ನು ಎಷ್ಟೋವೇಳೆ ನಮ್ಮೆಡೆಗೆ ಅಟ್ಟಿದ. ಆದರೂ ನಾವು ಕಿವಿಕೊಡಲೊಲ್ಲೆವು ಅವನ ಕರೆಗೆ. ಕ್ರಮೇಣ ಭಗವಂತನ ಕೈವಾಡ ಅದರೊಳಗೆ ಈಗ ಕಾಣುತ್ತದೆ. ನಾವಿಲ್ಲಿ ಪ್ರಯಾಣಮಾಡುವಾಗ ಜಗದ ಗೊಂದಲದಿಂದ ದೂರವಿದ್ದು ನಮ್ಮ ಜೀವನವನ್ನೇ ಮತ್ತೊಬ್ಬರಂತೆ ಸಾಕ್ಷಿಯಂತೆ ನೋಡಲು ಅವಕಾಶವಾಗುವುದು. ಯಾತ್ರಿಕರ ತಂಡದವರೆಲ್ಲ ಬಹುಪಾಲು ವಯಸ್ಕರು, ಪ್ರಪಂಚದ ಸುಖದುಃಖಗಳಿಗೆ ಸಿಕ್ಕಿ ಜರ್ಝರಿತ ರಾದವರು. "ಸಾಕು, ಎರಡು ದಿನದ ಬಾಳುವೆ. ನಿನ್ನೆಡೆಗೆ ಸೇರಿಸಿಕೊ ಶಿವ" ಎಂದು ಹಾರೈಸುವವರೆ ಹೆಚ್ಚು ಮಂದಿ.

ನಮ್ಮ ಜೊತೆಯಲ್ಲೆ ಹಿಂದಿನ ದಿನದ ತೆಲುಗು ತಾಯಿ ತನ್ನ ದುರದೃಷ್ಟ ವನ್ನು ದೂರುತ್ತ ಬರುತ್ತಿದ್ದಳು. ಆಕೆಗೆ ನೆನ್ನೆಯ ದಿನ ಊಟವಿರಲಿಲ್ಲ. ಮುಂದೆ ನಡೆಯಲು ತುಂಬಾ ತ್ರಾಸ ಪಡುತ್ತಿದ್ದಳು. ಆಕೆಯನ್ನು ಒಂದು ಕಂಡಿಯ ಮೇಲೆ ಕುಳ್ಳಿರಿಸಿ "ನೀವು ಗುಪ್ತಕಾಶಿಗೆ ಹೋಗಿ ಇರಿ, ಅಲ್ಲಿ ನೋಡುತ್ತೇವೆ" ಎಂದೆವು. ಆಕೆ ಸಾಮಾನು ಆಳಿನ ಹತ್ತಿರ ಇದ್ದರೂ ದೇವರ ದಯದಿಂದ ದುಡ್ಡನ್ನು ತನ್ನ ಹತ್ತಿರವೇ ಇಟ್ಟುಕೊಂಡಿದ್ದಳು.

ಕುಂದ್ ಎಂಬ ಒಂದು ಗ್ರಾಮದ ಅಂಗಡಿಯಲ್ಲಿ ನಾವೆಲ್ಲಾ ಟೀ ಕುಡಿ ಯುತ್ತಿದ್ದಾಗ, ಯಾವನೋ ಒಬ್ಬ ಕೂಲಿ ತನ್ನ ಯಜಮಾನಿ ಎಲ್ಲೊ ತಪ್ಪಿಸಿ ಕೊಂಡು ಹೋದಳು, ಅವಳು ಮದ್ರಾಸಿನ ಕಡೆಯವಳು, ನಿಮಗೆ ಗೊತ್ತೆ ಎಂದು ಕೇಳಿದ. ಆಕೆಯ ಹೆಸರೇನು ಎಂದು ಕೇಳಿದ್ದಕ್ಕೆ ಆಕೆಯ ಹೆಸರು ತಿಳಿಯದು ಎಂದ. ಹೇಗೆ ಇದ್ದಳು ಎಂದು ಚಹರೆಯನ್ನು ಕೇಳಿದ ಮೇಲೆ, ಬಹುಶಃ ನಮ್ಮೊಡನೆ ಇದ್ದ ತೆಲಗು ತಾಯೆ ಇರಬಹುದೆಂದು "ಈಗತಾನೆ ಆಕೆ ಮುಂದೆ ಹೋಗುತ್ತಿರುವಳು. ನಮ್ಮ ಕಡೆಯವರೊಬ್ಬರು ನಿನ್ನನ್ನು ಕರೆದು ಕೊಂಡು ಹೋಗುವರು" ಎಂದೆವು. ಮದ್ರಾಸಿನಿಂದ ನಮ್ಮೊಡನೆ ಬಂದವ

ರೊಬ್ಬರು ಮುಂದೆ ಹೋಗುತ್ತಿದ್ದ ಕೂಲಿಯನ್ನು ತೆಲುಗು ಹೆಂಗಸಿಗೆ ಭೇಟಿ ಮಾಡಿಸಿದಾಗ ಅವಳಿಗೆ ಆದ ಆನಂದಕ್ಕೆ ಪಾರವಿರಲಿಲ್ಲ. ಮೊದಲು ಸಿಟ್ಟಾಗಿ ಅಪೂರ್ವ ತೆಲುಗು ಬೈಗಳನ್ನೆಲ್ಲಾ ಆವನ ಮೇಲೆ ಮಳೆಗರೆದಳು ಆ ಪಹಾಡಿ ಯುವನಿಗೆ ಇವಳೇನು ಬಯ್ಯುತ್ತಿರುವಳೊ ಅರ್ಥವಾಗುವಂತೆ ಇಲ್ಲ. ಅವನು ಬೆರಗಾಗಿ ನಿಂತ. ಆಮೇಲೆ "ನಿಮಗಾಗಿ ನಾನು ಹಿಂದಿನ ಚಟ್ಟಿಯಲ್ಲಿ ಕಾಯು ತ್ತಿದ್ದರೆ ನೀವು ಮುಂದೆ ಬಂದುಬಿಟ್ಟಿರಿ. ಅದಕ್ಕೆ ನಾನೇನು ಮಾಡಲಿ" ಎಂದನು ಅನಂತರ ಅವರಿಬ್ಬರೂ ಯಾವಾಗಲೂ ಒಟ್ಟಿಗೇ ಹೋಗುತ್ತಿದ್ದರು.

ಇಲ್ಲಿಂದ ಎರಡು ಮೈಲಿ ಗುಪ್ತಕಾಶಿಗೆ. ಸ್ಥಳ ಬಹಳ ಕಡಿದು ಸ್ವಲ್ಪ ಬಿಸಿಲು ಬೇರೆ ಏರುತ್ತಿತ್ತು. ನಮಗೆ ಆಗಲೆ ೬ ಮೈಲಿ ಕಾಡು ರಸ್ತೆ ನಡೆದು ಸಾಕಾಗಿತ್ತು. ದಿಣ್ಣೆ ಸಿಕ್ಕಿತು. ಹತ್ತುವಾಗ ಬುಡದಲ್ಲೇ ಒಂದು ಗರುಡದೇವರ ದೇವಸ್ಥಾನವಿತ್ತು. ಅದರ ಹತ್ತಿರ ಒಬ್ಬ ಪೂಜಾರಿ ನಿಂತಿದ್ದ. ಎಲ್ಲಿ ದಿಣ್ಣೆ ಸಿಕ್ಕುವುದೊ ಹತ್ತುವುದಕ್ಕೆ ಅಲ್ಲೆಲ್ಲ ಅನೇಕ ಕಡೆ ಒಬ್ಬ ವಿನಾಯಕ ಕುಳಿತಿರು ವನು, ಇಲ್ಲವೆ ಒಬ್ಬ ಗರುಡ, ಇಲ್ಲವೆ ಒಬ್ಬ ಭೀಮಸೇನ ಇರುವನು. ಇವರಿಗೆ ಕೈಮುಗಿದು ಮೂರು ಕಾಸು ದಕ್ಷಿಣೆ ಕೊಟ್ಟರೆ ನಿರ್ವಿಘ್ನವಾಗಿ ನಮ್ಮನ್ನು ಮೇಲಕ್ಕೆ ಹತ್ತಿಸುತ್ತಾರೆ ಎಂದು ಪೂಜಾರಿ ಸಾರುತ್ತಿದ್ದ. ಎದುರಿಗೆ ಕಾಣುವ ಹತ್ತಬೇಕಾಗಿರುವ ದಿಣ್ಣೆಯನ್ನು ನೋಡುವಾಗಲಂತೂ ಎದೆ ನಡುಗುವುದು. ಅನೇಕರು ಮೂರು ಕಾಸು ಹೋದರೂ ಹೋಗಲಿ ಎಂದು ದೇವರಿಗೆ ಕೈಮುಗಿದು, ಸ್ವಲ್ಪಹೊತ್ತು ನಿಂತು, ಅನಂತರ ವಿಘ್ನಪರಿಹಾರಕ್ಕೆ ಪೂಜಾರಿ ಕೈಯಿಂದ ತೀರ್ಥ ತೆಗೆದುಕೊಳ್ಳುತ್ತಾರೆ. ದಣಿವಾರಿದಾಗ ಮುಂದೆ ಹೋಗಲು ಕೆಲವು ಕಾಲ ನಡೆಯಲು ಶಕ್ತಿ ಬಂದೇ ಬರುವುದು.

ಇನ್ನೊಂದು ಮೈಲಿ ಇದೆ ಗುಪ್ತಕಾಶಿ ಎನ್ನುವಾಗ ದಾರಿ ಮತ್ತೂ ಕಡಿದಾಗುವುದು. ಅಲ್ಲಿ ಕಾಶ್ಮೀರ ದೇಶದಿಂದ ಬಂದ ತಂದೆ ತಾಯಿ ಮಗಳು ಹತ್ತಿ ಹೋಗುತ್ತಿದ್ದರು. ತಾಯಿ ತಲೆಯ ಮೇಲೆ ಭಾರವಾದ ಗಂಟೊಂದು ಇತ್ತು. ತಂದೆ ವೃದ್ಧ, ವಯಸ್ಸು ಅರವತ್ತಕ್ಕೆ ಮೀರಿತ್ತು. ತನ್ನ ಮಗಳ ಹೆಗಲ ಮೇಲೆ ಕೈಯಿಟ್ಟುಕೊಂಡು ಪ್ರತಿಯೊಂದು ಹೆಜ್ಜೆಯನ್ನು ಎಣಿಸಿ ಇಡುವಂತೆ

ಇತ್ತು. ಆತ ನನ್ನನ್ನು ಇನ್ನೂ ಗುಪ್ತಕಾಶಿಗೆ ಎಷ್ಟು ದೂರವಿದೆ ಎಂದು ಕೇಳಿದ. ಇನ್ನೂ ಸುಮಾರು ಒಂದು ಮೈಲಿ ಇದೆ ಎಂದಾಗ ಆತ ಮತ್ತೂ ಖಿನ್ನನಾದ. ಆದರೆ ನಿರಾಶನಾಗಲಿಲ್ಲ. ಆಗಲಿ, ಕಷ್ಟಪಡದೆ ಶಿವನ ಸನ್ನಿಧಿಗೆ ಸೇರಲಾಗುವುದೇ 'ಜೈ ಕೇದಾರನಾಥನಿಗೆ' ಎಂದು ಹೇಳಿ ಮುಂದೆ ಹೆಜ್ಜೆ ಇಡತೊಡಗಿದ. ಮಗಳು ದಣಿದ ತಂದೆಯ ಕೈಗಳನ್ನು ಹೆಗಲ ಮೇಲೆ ಹೊತ್ತುಕೊಂಡು ಶಿವನೆಡೆಗೆ ದಾರಿ ತೋರುತ್ತಿದ್ದಳು. ಕಷ್ಟಪಟ್ಟು ನೆತ್ತಿಯನ್ನು ಸೇರಿದರು. ಅಲ್ಲಿ ಕುಡಿಯಲು ಒಂದು ಕೊಳವಿಯಲ್ಲಿ ನೀರು ಸುರಿಯುತ್ತಿತ್ತು. ಮುಂದೆ ಹೋದ, ತಾಯಿ ಅದರಲ್ಲಿ ನೀರು ತೆಗೆದುಕೊಂಡು ಸಕ್ಕರೆ ಬೆರಸಿ ಶರಬತ್ತು ಮಾಡಿಟ್ಟಳು. ಬಾಯಾರಿ ದಣಿದು ಬಂದ ತಂದೆ ಅದನ್ನು ಶಿವನ ಹೆಸರು ಹೇಳಿ ಕುಡಿದು ಅಲ್ಲಿಂದ ಒಂದೆರಡು ಫರ್ಲಾಂಗ್ ದೂರದಲ್ಲಿರುವ ಗುಪ್ತಕಾಶಿಗೆ ಸೇರಿದರು.

ಗುಪ್ತಕಾಶಿ ರುದ್ರಪ್ರಯಾಗಕ್ಕೂ ಕೇದಾರನಾಥಕ್ಕೂ ಮಧ್ಯದಲ್ಲಿದೆ. ಇದರ ಎತ್ತರ ಸುಮಾರು ೪೮೦೦ ಅಡಿಗಳು ಸಮುದ್ರ ಮಟ್ಟದಿಂದ. ಹಿಂದೆ ಅನೇಕ ಋಷಿಗಳು ಗುಪ್ತವಾಗಿ ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡರಂತೆ. ಅದಕ್ಕೇ ಇದಕ್ಕೆ ಗುಪ್ತಕಾಶಿ ಎಂದು ಹೆಸರು. ಇಲ್ಲಿ ಒಂದು ಶಿವನ ದೇವಾಲಯವಿದೆ. ಅದರ ಪಕ್ಕದಲ್ಲಿ ಅರ್ಧನಾರೀಶ್ವರನ ದೇವಾಲಯವಿದೆ. ಇದರ ಹಿಂದೆ ಪಂಚ ಪಾಂಡವರು, ದ್ರೌಪದಿ, ಕುಂತಿಯರು ಇರುವ ಮತ್ತೊಂದು ದೇವಸ್ಥಾನವಿದೆ. ದೇವಸ್ಥಾನದ ಮುಂದೆ ಒಂದು ಸಣ್ಣ ಕೊಳ ಇದೆ. ಅದಕ್ಕೆ ಎರಡು ಝರಿಗಳು ಎರಡು ಗೋಮುಖದಿಂದ ಬೀಳುವುವು. ಅದರಲ್ಲಿ ಒಂದನ್ನು ಗಂಗಾ ಎಂದೂ ಮತ್ತೊಂದನ್ನು ಯಮುನಾ ಎಂದೂ ಕರೆಯುವರು. ಯಾತ್ರಿಕರು ಅಲ್ಲಿ ಸ್ನಾನ ಮಾಡಿ ದೇವಸ್ಥಾನಕ್ಕೆ ದರ್ಶನಕ್ಕೆ ಹೋಗುವರು. ಇಲ್ಲಿ ಮಂದಾಕಿನಿ ನದಿ ಸುಮಾರು ಒಂದು ಸಾವಿರ ಅಡಿಗಳ ಕೆಳಗಿರುವ ಕಣಿವೆಯಲ್ಲಿ ಎರಡು ಮೈಲಿ ದೂರದಲ್ಲಿ ಹರಿಯುತ್ತಿರುವುದು. ಇಲ್ಲಿಂದ ಕೇದಾರನಾಥದ ಬೆಟ್ಟ ಸುಂದರವಾಗಿ ಕಾಣುವುದು.

ಸ್ನಾನಮಾಡಿ ಕೋಣೆಯಲ್ಲಿ ವಿಶ್ರಮಿಸಿಕೊಳ್ಳುತ್ತಾ ಕುಳಿತಿದ್ದಾಗ ಕೇದಾರನಾಥದ ಒಬ್ಬ ಪಂಡನಿಗೆ ನಮ್ಮ ಸುಳಿವು ಗೊತ್ತಾಗಿ ಬಂದ. ಈ ಸ್ಥಳ

ದಿಂದಲೇ ಪಂಡರು ಕೇದಾರನಾಥಕ್ಕೆ ಹೋಗುವ ಯಾತ್ರಿಕರನ್ನು ಶಿಕಾರಿ ಮಾಡುವರು. ಅವರು ಜೊತೆಯಲ್ಲಿ ಬಂದು ದೇವರ ದರ್ಶನ ಮಾಡಿಸುತ್ತೇವೆ ಎನ್ನುವರು. ಬೇಡ ಎಂದರೂ ಅವರು ನಮ್ಮನ್ನು ಬಿಡುವಂತೆ ಇಲ್ಲ. ಜಿಗಣೆಯಂತೆ ಅಂಟುವರು. ನಮ್ಮನ್ನು ನೋಡಲು ಬಂದ ಪಂಡ ದೊಡ್ಡದೊಂದು ದಫ್ತರವನ್ನು ತಂದ ಅದರಲ್ಲಿ ನಮ್ಮ ಸಂಘದ ಕೆಲವು ಸ್ವಾಮಿಗಳ ಹೆಸರನ್ನು ತೋರಿಸಿದ. ನಿಮ್ಮೊಡನೆ ಬಂದು ನಿಮಗೆ ಎಲ್ಲಾ ಅನುಕೂಲಗಳನ್ನೂ ಒದಗಿಸಿಕೊಡುತ್ತೇನೆ ಎಂದ. ಅದಕ್ಕೆ ನಾನು “ ದಾನ ಗೀನ ಕೊಡೋರಲ್ಲ, ದೇವಸ್ಥಾನದಲ್ಲಿ ಯಾವ ದೊಡ್ಡ ಪೂಜೆಯನ್ನೂ ಮಾಡಿಸುವವರಲ್ಲ. ನಾವು ಸಾಧಾರಣ ಯಾತ್ರಿಕರು. ನಿಮ್ಮ ಶ್ರಮಕ್ಕೆ ತಕ್ಕ ಪ್ರತಿಫಲ ಕೊಡುವ ಚೈತನ್ಯವಿಲ್ಲ, ದಯವಿಟ್ಟು ನಮ್ಮೊಡನೆ ಬರಬೇಡಿ ” ಎಂದು ನಯವಿನಯದಿಂದ ಹೇಳಿದರೂ, ಆ ಮನುಷ್ಯ ಬಿಡಲೊಲ್ಲ. ಕೊನೆಗೆ ಸ್ವಲ್ಪ ಒರಟು ಭಾಷೆ ಉಪಯೋಗಿಸಿಯೆ ಆ ಮನುಷ್ಯನ ಉಪದ್ರವದಿಂದ ಪಾರಾಗಬೇಕಾಯಿತು.

ನಮ್ಮಲ್ಲಿ ಇದ್ದವರ ಗಡಿಯಾರಗಳು ಒಬ್ಬೊಬ್ಬರದು ಒಂದೊಂದು ಕಾಲ ತೋರಿಸುತ್ತಿತ್ತು. ಅದನ್ನು ತಿದ್ದಬೇಕಾದರೆ ಯಾವುದಾದರೊಂದು ಸರಿಯಾದ ಕಾಲಸೂಚಿ ಇರಲಿಲ್ಲ. ದೇವಸ್ಥಾನದ ಕೆಳಗೆ ಒಂದು ಅಂಗಡಿಯಲ್ಲಿ ಒಬ್ಬ ರೇಡಿಯೋ ಯಂತ್ರ ಇಟ್ಟುಕೊಂಡಿದ್ದ. Time Signal ಬಂದಾಗ ನನ್ನ ಗಡಿಯಾರ ತಿದ್ದಿಕೊಂಡೆ. ಸಂಜೆ ಸ್ವಲ್ಪ ಹೊರಗೆ ಅಡ್ಡಾಡಿಕೊಂಡು ಬಂದೆವು. ಹಿಂದೆ ಅನೇಕ ಸಾಧುಗಳು ತಪಸ್ಸುಮಾಡಿ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಂಡ ಸ್ಥಳಇದು. ಶಿವ ಭಕ್ತರ ಮನೋಭೀಷ್ಟವನ್ನು ನೆರವೇರಿಸುವ ಕಲ್ಪತರುವಾಗಿರುವನು ಇಲ್ಲಿ ಎಂದು ಸ್ಥಳಪುರಾಣ ಸಾರುವುದು. ಆಗ ಶಿವನ ಈ ಸ್ತೋತ್ರ ಜ್ಞಾಪಕಕ್ಕೆ ಬಂತು.

## ಶಿವಕಲ್ಪತರು ಸ್ತುತಿ

ಪ್ರಭುಮೀಶ ಮನೀಶ ಮಹೇಶಗುಣಂ
ಗುಣಹೀನ ಮಹೀಶ ಗರಾಭರಣಮ್ ।
ರಣನಿರ್ಜಿತ ದುರ್ಜಯ ದೈತ್ಯಂ ಪುರಂ
ಪ್ರಣಮಾಮಿಶಿವಂ ಶಿವಕಲ್ಪತರುಮ್ ॥೧॥

ಗಿರಿರಾಜ ಸುತಾನ್ವಿತ ವಾಮತನುಂ
ತನು ನಿಂದಿತರಾಜಿತ ಕೋಟಿವಿಧುಮ್ ।
ವಿಧಿ ವಿಷ್ಣು ಶಿರೋಧೃತ ಪಾದಯುಗಂ
ಪ್ರಣಮಾಮಿಶಿವಂ ಶಿವಕಲ್ಪತರುಮ್ ॥೨॥

ಶಶಿಲಾಂಛಿತ ರಂಜಿತ ಸನ್ಮಕುಟಂ
ಕಟಿಲಂಬಿತ ಸುಂದರ ಕೃತ್ತಿಪಟಂ ।
ಸುರ ಶೈವಲಿನೀಕೃತ ಪೂತಜಟಂ ।
ಪ್ರಣಮಾಮಿಶಿವಂ ಶಿವಕಲ್ಪತರುಮ್ ॥೩॥

ನಯನತ್ರಯ ಭೂಷಿತ ಚಾರುಮುಖಂ
ಮುಖಪದ್ಮಪರಾಜಿತ ಕೋಟಿ ವದುಮ್ ।
ವಿಧುಖಂಡ ಸುಮುಂಡಿತ ಭಾಲತಟಂ
ಪ್ರಣಮಾಮಿ ಶಿವಂ ಶಿವಕಲ್ಪತರುಮ್ ॥೪॥

ವೃಷರಾಜನಿಕೇತನ ಮಾದಿಗುರುಂ
ಗರಲಾಶನಮಾಜಿ ವಿಷಾಣಧರಂ ।
ಪ್ರಮಥಾಧಿಪ ಸೇವಕ ರಂಜನಕಂ
ಪ್ರಣಮಾಮಿ ಶಿವಂ ಶಿವಕಲ್ಪತರುಮ್ ॥೫॥

ಜಗದುದ್ಭವ ಪಾಲನ ನಾಶಕರಂ
ತ್ರಿದಿವೇಶ ಶಿರೋಮಣಿ ದೃಷ್ಟಪದಂ ।
ಪ್ರಿಯಮಾನವ ಸಾಧು ಜನೈಕಗತಿಂ
ಪ್ರಣಮಾಮಿ ಶಿವಂ ಶಿವಕಲ್ಪತರುಮ್ ॥೬॥

## ೮

# ಘಾಟಿ

ಗುಪ್ತಕಾಶಿಯಿಂದ ೧೪ ನೇ ತಾರೀಖು ಬೆಳಿಗ್ಗೆ ಹೊರಟೆವು. ಅಲ್ಲಿಂದ ಒಂದು ಮೈಲಿ ಬಂದರೆ ನಲ್ಲಚೆಟ್ಟಿ ಎಂಬ ಗ್ರಾಮ ಸಿಕ್ಕುವುದು. ಅಲ್ಲಿಂದ ಒಂದು ಮಾರ್ಗ ಬಲಗಡೆಗೆ ಚಮೋಲಿಗೆ ಹೋಗಿ ಅಲ್ಲಿಂದ ಬದರಿಗೆ ಹೋಗುವುದು. ಇದುವರೆಗೆ ನಮಗೆ ಕೇದಾರನಾಥದಿಂದ ಹಿಂತಿರುಗಿ ಬರುತ್ತಿದ್ದ ಯಾತ್ರಿಕರ ದರ್ಶನವಾಗಿರಲಿಲ್ಲ ಏಕೆಂದರೆ ಕೇದಾರನಾಥಕ್ಕೆ ಹೋಗುವವರೆಲ್ಲ ಇಲ್ಲಿಯವರೆಗೆ ಬಂದು ಇಲ್ಲಿಂದ ಬದರಿಗೆ ಹೋಗುವರು. ನಮಗೆ ಇಲ್ಲಿಂದ ಕೇದಾರದವರೆಗೆ ದರ್ಶನ ಮಾಡಿಕೊಂಡು ಹಿಂತಿರುಗಿ ಬರುತ್ತಿದ್ದ ಯಾತ್ರಿಕರ ತಂಡ ಗೋಚರಿಸ ತೊಡಗಿತು. ಬರುವವರು ಹೋಗುತ್ತಿರುವ ಯಾತ್ರಿಕರನ್ನು ಕಂಡರೆ "ಜೈ ಕೇದಾರನಾಥಕೀ" ಎಂದು ಹಾರೈಸುವರು. ಹೋಗುವವರ ಯಾತ್ರೆ ಸುಗಮವಾಗಲಿ, ಶಿವನ ದಯೆ ಇರಲಿ ಎಂದು ಹಾರೈಸುವ ಒಂದು ಚಿಹ್ನೆ.

ದಾರಿಯಲ್ಲಿ ಹೋಗುತ್ತಿರುವಾಗ ಅನೇಕ ಜನ ಮಕ್ಕಳು "ಪೈಸಾ ದೇವ್ ಸೇಟ್‌ಜಿ" ಎಂದು ಗೋಗರೆಯುವರು. ಅಲ್ಲಿರುವವರಿಗೆ ಯಾತ್ರೆಯ ಕಾಲ ಶುರುವಾದಾಗಲೆ ಸ್ವಲ್ಪ ಕೈಗೆ ಕಾಸು ಬರಬೇಕಾದರೆ ಯಾತ್ರಿಕರಿಂದ. ಇವರು ಇರುವ ಕಡೆ ಫಲವತ್ತಾದ ಭೂಮಿಯಿಲ್ಲ. ಬೆಟ್ಟವನ್ನು ಕಡಿದು ಮೆಟ್ಟಲು ಮೆಟ್ಟಲಾಗಿ ಮಾಡಿ ಅಲ್ಲಿ ಗೋಧಿ ಮುಂತಾದುವನ್ನು ಬೆಳೆಸುವರು. ಅವರು ಬೆಳೆಸುವುದು ಅವರ ಜೀವನೋಪಾಯಕ್ಕೆ ಆಗುವುದೇ ಕಷ್ಟ. ಅದರಲ್ಲಿ ಅವರ ಬಟ್ಟೆಬರೆಗೆ ದುಡ್ಡು ಸಿಕ್ಕಬೇಕಾದರೆ ಗಂಡಸರು ಯಾತ್ರಿಕರ ಸಾಮಾನು

ಹೊರಲು ಹೋಗುವರು. ಅದರಿಂದ ಬಂದ ದುಡ್ಡಿನಿಂದ ಮದುವೆ ಮುಂತಾದುವನ್ನು ಮಾಡಬೇಕು. ವರ್ಷದಲ್ಲಿ ಮಾಡಿದ ಸಾಲ ತೀರಿಸಬೇಕು. ಹೆಂಗಸರು ಕರಿಯ ತುಪ್ಪಟದಿಂದ ದಾರ ತೆಗೆದು ತಾವೇ ಬಟ್ಟೆ ಮಾಡಿಕೊಳ್ಳುವರು. ಅವರು ಯಾತ್ರಿಕರನ್ನು ಸಂಧಿಸುವಾಗ "ಸಿಯೀದಾರ ದೇಪೋ ಸೇಟಜಿ" ಎನ್ನುವರು, ಅಂದರೆ ಸೂಜಿ ದಾರ ಕೊಡಿ ಎಂದು. ಎಲ್ಲರೂ ಸೂಜಿ ದಾರವನ್ನು ಕೇಳುವವರೇ ಅವರ ಬಟ್ಟೆಯನ್ನು ಹೊಲಿದುಕೊಳ್ಳುವುದಕ್ಕೆ. ಹೆಂಗಸರು ಬರೀ ಒಂದು ಕಂಬಳಿಯ ನಿಲುವಂಗಿಯನ್ನು ತಗಲುಹಾಕಿಕೊಡು ಸೊಂಟಕ್ಕೆ ಒಂದು ದುಪಟಿಯನ್ನು ಬಿಗಿದುಕೊಳ್ಳುವರು. ಬಹಳ ಕಷ್ಟಪಟ್ಟು ಕೆಲಸ ಮಾಡುವರು. ದೊಡ್ಡದೊಂದು ಬುಟ್ಟಿಯನ್ನು ಬೆನ್ನಿಗೆ ತಗುಲುಹಾಕಿಕೊಂಡು ಅದರಲ್ಲಿಗೊಬ್ಬರವನ್ನು ಮನೆಯಿಂದ ಹೊಲಕ್ಕೆ ತೆಗೆದುಕೊಂಡು ಹೋಗುವರು. ಹೆಗಲ ಮೇಲೆ ಸೌದೆಯನ್ನು ಹೊತ್ತುಕೊಂಡು ಹೋಗುವರು, ಹೊಲದಲ್ಲಿ ಕೆಲಸಮಾಡುವರು. ನೋಡಲು ಸುಂದರವಾಗಿರುವರು. ಹಿಮಾಲಯದ ವಾತಾವರಣ ಅವರಿಗೆ ಕೊಟ್ಟ ವರ ಇರಬಹುದು. ಹೆಂಗಸರೆಲ್ಲ ಎಡ ಮೂಗಿನ ತುದಿಗೆ ದೊಡ್ಡದೊಂದು ಬಳೆಯನ್ನು ಬುಲಾಕಿನಂತೆ ತಗಲುಹಾಕಿಕೊಳ್ಳುವರು. ಆ ಬಳೆ ಎಷ್ಟು ಅಗಲವಿರುವುದು ಎಂದರೆ ಗಲ್ಲಕ್ಕಿಂತಲೂ ಕೆಳಗೆ ಬರುವುದು. ಮತ್ತೆ ಕೆಲವರು ಮೂಗು ಮಧ್ಯದಲ್ಲಿ ಒಂದು ತಗಡನ್ನು ಮೂಗಿನಬಟ್ಟಿನಂತೆ ತೂಗಿಬಿಡುವರು. ಅದು ಬಾಯಿಯ ಅರ್ಧ ಭಾಗವನ್ನೆಲ್ಲಾ ಮುಚ್ಚಿ ಕೆಳಗಿನ ಗಲ್ಲದವರೆಗೂ ಬರುವುದು. ಅವರು ಊಟ ಮಾಡಬೇಕಾದರೆ ಎಡಗೈಯಿಂದ ಮೂಗುಬಟ್ಟನ್ನು ಸರಿಸಿ ತುತ್ತನ್ನು ತಿನ್ನಬೇಕಾಗುವುದು! ಆ ಬೆಟ್ಟದ ಜನರದೇ ಒಂದು ಫ್ಯಾಶನ್. ಅವರಿಗೆ ಅದೇ ಚೆಂದ. ಈ ವೇಷಭೂಷಣಗಳನ್ನು ನೋಡಿದಾಗ ನಮಗೆ ಸ್ಕೂಲು ದಿನಗಳಲ್ಲಿ ಮಾಡುವ ಫ್ಯಾನ್ಸಿ ಡ್ರೆಸ್ ಕಾಂಪಿಟಿಶನ್ ಜ್ಞಾಪಕ ಬರುವುದು. ಬಹುಶಃ ನಮ್ಮವರ ಉಡುಗೆ ತೊಡಿಗೆ ಅವರಿಗೆ ಹಾಗೆ ಕಾಣಬಹುದು. ಒಬ್ಬರಿಗೆ ಮತ್ತೊಬ್ಬರು ವಿಚಿತ್ರವಾಗಿ ಕಾಣುವರು. ಇದೆ ತಾನೆ ಪ್ರಪಂಚ. ಪರ್ವತ ರಾಜಕುಮಾರಿ ಭವಾನಿಯೂ ಇದೇ ಉಡುಗೆ ತೊಡಿಗೆಯಲ್ಲಿ ಇದ್ದಳು ಎಂದು ಕಾಣುವುದು. ಇವರ ಉಡುಗೆ ತೊಡಿಗೆ ನಮ್ಮ ಊರಿಗೆ ಹೋದಮೇಲೆ ನಮ್ಮವರಿಗೆ ತೋರಿಸಬೇಕೆಂದು ಅವರು ಕಾಸು ಕೇಳಲು ಬಂದಾಗ ಅವರನ್ನು

ಕ್ಯಾಮೆರಾ ಎದುರಿಗೆ ನಿಲ್ಲಿಸಿ ಫೋಟೊ ತೆಗೆದು ಕಾಸು ಕೊಟ್ಟು ಕಳುಹಿಸು ತ್ತಿದ್ದೆವು. ಒಂದು ಗೋಧಿ ಹೊಲದಲ್ಲಿ ತಾಯಿ ಮಗಳಿಬ್ಬರೂ ಬೆಳೆದ ತೆನೆಯನ್ನು ಕೊಯ್ಯುತ್ತಿದ್ದರು. ಅವರನ್ನು ಆ ಹೊಲದಲ್ಲಿ ನಿಲ್ಲಿಸಿ ಫೋಟೊ ತೆಗೆದೆವು. ಆ ಮಗುವಿಗೆ ಒಂಭತ್ತು ಹತ್ತು ವಯಸ್ಸು. ಆ ಬೆಟ್ಟದ ವೇಷ ಭೂಷಣಗಳಲ್ಲಿ ಕೈಯಲ್ಲಿ ಗೋಧಿತೆನೆ ಹಿಡಿದುಕೊಂಡು ನಿಂತಿರುವ ಚಿತ್ರ ತೆಗೆದೆವು. ಪುಟ್ಟ ಗೌರಮ್ಮನಂತೆಯೇ ಕಂಡಳು. ತಾಯಿಗೆ ತನ್ನ ಮುದ್ದು ಮಗಳು ಹೇಗೆ ಕಾಣು ತ್ತಾಳೆ ಫೋಟೋದಲ್ಲಿ ಎಂದು ನೋಡಲು ಆಸೆ. ಅವಳು ನನ್ನ ಮಗಳ ಫೋಟೊ ಕೊಡಿ ಎಂದು ಕೇಳಿದಳು. ಅದನ್ನು ಡೆವಲಪ್ ಮಾಡಿ ಪ್ರಿಂಟ್ ಮಾಡಬೇಕು ಎಂದು ಏನೇನೋ ಹೇಳಿದೆವು. ಆಕೆಗೆ ತೃಪ್ತಿಯಿಲ್ಲ. ಅ ಮಗುವನ್ನು ಹೊಲದಲ್ಲಿ ನಿಲ್ಲಿಸಿ ತಾಯಿಯನ್ನು Photo ಪೆಟ್ಟಿಗೆ ಹತ್ತಿರ ಕರೆದು vision glass ನಲ್ಲಿ ಕಾಣುವ ಅವಳ ಮಗಳನ್ನು ತೋರಿಸಿ, ಇದೇ ನಿನ್ನ ಮಗಳು ಎಂದೆ. ಅವಳಾ ನಂದಕ್ಕೆ ಪಾರವೇ ಇರಲಿಲ್ಲ. ಅವರಿಬ್ಬರಿಗೂ ದಕ್ಷಿಣೆ ಕೊಟ್ಟು ಮುಂದೆ ಹೊರಟೆವು.

ಸುಮಾರು ಹತ್ತು ಮೈಲಿ ನಡೆದು ಘಾಟ ಎಂಬ ಚೆಟ್ಟಿಗೆ ಬಂದಾಗ ಆವತ್ತು ಎಂದಿಗಿಂತ ಹೊತ್ತಾಗಿತ್ತು. ಉರಿಬಿಸಿಲು ಬೇರೆ. ಅಲ್ಲಿ ಅಕ್ಕ ಪಕ್ಕದಲ್ಲಿದ್ದ ತಂಗುವ ಸ್ಥಳಗಳೆಲ್ಲ ಯಾತ್ರಿಕರಿಂದ ತುಂಬಿಹೋಗಿತ್ತು. ನಮ್ಮವರಿಗಂತೂ ನಡೆದು ನಡೆದು ಸಾಕಾಗಿತ್ತು. ಎಲ್ಲಿಯಾದರೊಂದುಕಡೆ ಕುಳಿತರೆ ಸಾಕು ಎನ್ನುತ್ತಿದ್ದರು. ಆ ಗ್ರಾಮವನ್ನು ನೋಡಿಕೊಂಡು ಹಾಗೆಯೇ ಕೊನೆಗೆ ಬಂದೆವು. ಇನ್ನು ಇಲ್ಲೂ ನಿಲ್ಲುವುದಿಲ್ಲ ಮುಂದೆ ಹೋಗುತ್ತಾರೆ, ಎಂದು ಅನುಮಾನದಿಂದೆ ಸಿಕ್ಕಿದ ಕೊನೆಯ ಮನೆಯ ಮುಂದೆಯೇ ಸತ್ಯಾಗ್ರಹ ಹೂಡಿದರು. ಅಲ್ಲಿಂದ ಸುಮಾರು ಎರಡು ಪರ್ಲಾಂಗ್ ಮೇಲೆ ಹೋದರೆ ಪ್ರವಾಸಿ ಬಂಗಲೆ ಇದೆ, ಅದು ಖಾಲಿ ಇದೆ ಎಂದು ಹೇಳಿ ಅವರನ್ನು ಮನಸ್ಸಿಲ್ಲದ ಮನಸ್ಸಿನಿಂದ ನಡೆಸಿಕೊಂಡು ಹೋಗಿ ಸೇರಿದೆವು. ಊರಿನ ಮನೆಗಳಿಗಿಂತ ಎತ್ತರದಲ್ಲಿ ಸುಂದರವಾದ ಸ್ಥಳದಲ್ಲಿ ಪ್ರವಾಸ ಗೃಹವಿತ್ತು. ಪುಣ್ಯವಶಾತ್ ಯಾರೂ ಬಂದಿರಲಿಲ್ಲ. ನಮ್ಮ ಕಡೆಯ ನಾಲ್ಕು ಕೂಲಿಗಳು ಜೊತೆಗೆ ನಾವು ಆರು ಜನ ಇವರನ್ನು ನೋಡಿ ಬಂಗಲೆ ಯುವನು ಬಹಳ ವಿಶ್ವಾಸದಿಂದ ಕಂಡ. ಆತ ಯಾರನ್ನೊ ನಿರೀಕ್ಷಿಸುತ್ತಿದ್ದಂತೆ

ಇತ್ತು. ಕೆಲವು ದಿನದ ಹಿಂದೆ ಯಾರೋ ರಾಜರ ಕಡೆಯವರು ಇಂದು ಬರುತ್ತಾರೆ ಅಲ್ಲಿಗೆ ಎಂದು ಅವನಿಗೆ ಒಂದು ಕಾಗದ ಬಂದಿತ್ತು. ಆತ ಮೊದಲು ನಮ್ಮನ್ನು ಕಂಡಾಗ ನಾವೇ ಆ ರಾಜರ ಕಡೆಯವರು ಇರಬೇಕೆಂದು ಯೋಚಿಸಿಯೆ ನಮಗೆ ಅಷ್ಟೊಂದು ಗೌರವ ಮುಂತಾದುದನ್ನು ತೋರಿದ್ದು. ಕ್ರಮೇಣ ಮಾತ ನಾಡುತ್ತಿದ್ದಂತೆ ಆತನಿಗೆ ಅರ್ಥವಾಯಿತು ನಾವು ಯಾವ ರಾಜನ ಕಡೆಯವರೂ ಅಲ್ಲ ಎಂದು. ಅನಂತರ ನೀವು ಇಲ್ಲಿ ತಂಗುವುದಕ್ಕೆ ನಿಮಗೆ ಅಪ್ಪಣೆ ಇದೆಯೆ ಎಂದ, ಅಪ್ಪಣೆ ಇಲ್ಲ, ಇದಕ್ಕೆ ಒಂದು ದಿನ ತಂಗಿದರೆ ಏನು ಕೊಡಬೇಕಾಗು ವುದೊ ಅದನ್ನು ಕೊಡುತ್ತೇವೆ ಎಂದೆವು. ಇವರಿಂದ ಏನೋ ತನಗೆ ಗಿಟ್ಟಬಹು ದೆಂದು ಒಪ್ಪಿಕೊಂಡ. ತಾನೂ ಕೂಡ ಊಟಕ್ಕೆ ಇರುತ್ತೇನೆ ಎಂದ. ನಮ್ಮ ಅಡಿಗೆಯವನು ತನ್ನ ಊಟಕ್ಕೆ ಚಪಾತಿ ಮಾಡಿಕೊಳ್ಳುತ್ತಿದ್ದ. ಜೊತೆಗೆ ಇವನಿಗೂ ಮಾಡಿ ಬಡಿಸು ಎಂದೆವು. ಆದರೆ ಆತ ಅವತ್ತು ಚಪಾತಿ ತಿನ್ನುವುದಿಲ್ಲ ವಂತೆ. ಏನೋ ವ್ರತವೊ ನೋಹಿಯೊ ಅಂತೆ. ಬರೀ ಅನ್ನ ಕೊಟ್ಟರೆ ಊಟ ಮಾಡುತ್ತೇನೆ ಎಂದ. ಆಗಲಿ ಎಂದೆವು. ಅಂದು ಚಪಾತಿ ತಿಂದರೆ ವ್ರತ ಭಂಗ, ಅನ್ನ ಉಂಡರೆ ವ್ರತ ಪಾಲನೆ! ನಮ್ಮಲ್ಲಿ ಏಕಾದಶಿ ದಿನ ಅನೇಕರು ಮಾಡು ವಂತೆ ಅನ್ನ ತಿನ್ನೋದು ಬಿಟ್ಟು ಉಪ್ಪಿಟ್ಟು ದೋಸೆ ಮೆದ್ದಂತೆ! ಆ ಸ್ಥಳ ಚೆನ್ನಾಗಿತ್ತು. ನೊಣದ ಕಾಟ ಅಷ್ಟಿರಲಿಲ್ಲ. ಶುಭ್ರವಾಗಿತ್ತು, ಸ್ಥಳ. ಕುರ್ಚಿ ಮೇಜು ನಿಲುವುಗನ್ನಡಿ ಒಳಗೇ ನಲ್ಲಿ ಬೇರೆ ಇದ್ದವು. ರಾಜರ ಬಳಗ ಯಾರೋ ಬರುತ್ತಾರೆ ಎಂದು ಅವನು ಗುಡಿಸಿ ಎಲ್ಲಾ ಚೆನ್ನಾಗಿಟ್ಟಿದ್ದ. ಆ ಸೌಭಾಗ್ಯ ನಮ್ಮ ಪಾಲಿಗೆ ಒದಗಿತು!

ಯಾತ್ರೆ ಮಾಡುವಾಗ ದಾರಿಯಲ್ಲಿ ಸಿಕ್ಕುವ ತರಕಾರಿ ಎಂದರೆ ಈರುಳ್ಳಿ ಆಲೂಗೆಡ್ಡೆ, ಅದಲ್ಲದೆ ಬೇರೇನೂ ಇಲ್ಲ. ಪ್ರತಿ ದಿನ ಅದನ್ನು ತಿಂದೂ ತಿಂದೂ ಬೇಜಾರಾಗಿತ್ತು. ಏನಾದರೂ ಬೇರೆ ಬಗೆಯ ತರಕಾರಿ ಸಿಕ್ಕೀತೆ ಎಂದು ಕನಸು ಕಾಣುತ್ತಿದ್ದೆವು. ಆಗ ನಮ್ಮ ಕೂಲಿಯವರು ಸುತ್ತಮುತ್ತಲ ಕಾಡಿಗೆ ನುಗ್ಗಿ ಎಂಥದೊ ಒಂದು ಬಗೆಯ ಸೊಪ್ಪನ್ನು ತಂದು ಬೇಯಿಸಿದರು. ಅದನ್ನು ನಾವು ತಿನ್ನೋಣ ಎಂದರೆ ಮಿಕ್ಕಿರುವವರಿಗೆ ಅಂಜಿಕೆ ಏನು ಆಗಿಬಿಡುವುದೊ ಎಂದು. ನಾನು ಆಳುಗಳಿಗೆ ಹೇಳಿದೆ "ನೀವು ಮಾಡೊ ಪಲ್ಯನೇ ನನಗೆ ಸ್ವಲ್ಪ ಕೊಡಿ"

ಎಂದು. ಅವರಿಗೆ ತುಂಬಾ ಸಂತೋಷ ಆಯಿತು. ನಿಜವಾಗಿ ಈ ಸ್ವಾಮಿಗಳು ತಿನ್ನುತ್ತಾರೆಯೆ ನಾವು ಕೊಟ್ಟಿದ್ದನ್ನು ಎಂದು ಆಶ್ಚರ್ಯವಾಯಿತು. ನಾನು ಅದನ್ನು ತಿಂದಾದ ಮೇಲೆ ಕೇಳಿದರು ಹೇಗಿತ್ತು ಪಲ್ಯ ಅಂತ. ನಾನಂದೆ ತುಂಬಾ ಚೆನ್ನಾಗಿತ್ತು ಎಂದು. ಅದನ್ನು ಕೇಳಿದಾಗ ಅವನ ಮುಖ ಹಿಗ್ಗಿ ಹೋಯಿತು. ರುಚಿಯಾಗಿರೊ ಅಡಿಗೆ ಮಾಡಿ ಅದನ್ನು ಮತ್ತೊಬ್ಬರಿಗೆ ಕೊಟ್ಟು ಚೆನ್ನಾಗಿದೆ ಎನ್ನಿಸಿಕೊಂಡರೆ ಮಾಡಿದವರಿಗೊಂದು ಸಂತೋಷ.

೯

# ಗೌರೀಕುಂಡ

ಹದಿನೈದನೆ ತಾರೀಖು ಶನಿವಾರ ಬೆಳಿಗ್ಗೆ ಘಾಟ ಪ್ರವಾಸಿ ಗೃಹದಿಂದ ಹೊರಟೆವು. ಅಲ್ಲಿಂದ ಸುಮಾರು ಒಂದು ಮೈಲಿ ಇಳಿಯಬೇಕು. ಅಲ್ಲಿ ಸಣ್ಣ ದೊಂದು ನದಿಯನ್ನು ದಾಟಿದ ಮೇಲೆ ಪುನಃ ಹತ್ತಿ ಹೋಗಬೇಕು. ಸಣ್ಣ ಸಣ್ಣ ಝರಿಗಳು ಎಲ್ಲಿ ಮೇಲಿನಿಂದ ಕೆಳಗೆ ವೇಗದಿಂದ ಹರಿಯುತ್ತವೆಯೊ ಅಲ್ಲೆಲ್ಲ ಅನೇಕ ಕಡೆ ಆ ನೀರಿನ ಒಂದು ಸಣ್ಣ ಪ್ರವಾಹವನ್ನು ಕೆಳಗೆ ತಂದು ಅದರಿಂದ ಬೀಸುವ ಕಲ್ಲು ತಿರುಗುವಂತೆ ಮಾಡುವರು. ಅವರಿಗೆ ಈ ನದಿಯಿಂದ ಪ್ರಯೋಜನ ಇಷ್ಟೇ. ನದೀ ನೀರಿನಿಂದ ಅವರ ಬೆಳೆಗೆ ಅಷ್ಟೇನೂ ಅನುಕೂಲವಿಲ್ಲ. ಏಕೆಂದರೆ ಎಲ್ಲಾ ದಿಣ್ಣೆ ತಗ್ಗು. ವಿದ್ಯುಚ್ಛಕ್ತಿಯನ್ನು ಉತ್ಪಾದನೆ ಮಾಡಬೇಕಾದರೆ ಹೆಚ್ಚು ಹಣ ಹಾಕಬೇಕು. ಅದಕ್ಕೆ ತಕ್ಕ ಯಂತ್ರ ಸಲಕರಣೆ ಇಲ್ಲಿನ ಸ್ಥಳಕ್ಕೆ ತರಬೇಕಾದರೆ ಕಷ್ಟ. ಪಾಶ್ಚಾತ್ಯ ದೇಶಗಳಲ್ಲಿ ಇಂತಹ ಸ್ಥಳಗಳಿದ್ದರೆ ಎಷ್ಟೋ ವಿದ್ಯುಚ್ಛಕ್ತಿಯನ್ನು ಉತ್ಪಾದನೆ ಮಾಡಿ ದೇಶದ ಸುಖ ಸಂಪತ್ತನ್ನು ಅಭಿವೃದ್ಧಿ ಮಾಡಿಕೊಳ್ಳುತ್ತಿದ್ದರು. ಆದರೆ ಇಲ್ಲಿ ಆ ನದಿಗೆಲ್ಲ ಒಂದೊಂದು ಪವಿತ್ರ ಹೆಸರಿಟ್ಟು ಇಲ್ಲಿ ಮಿಂದರೆ ಪಾಪನಾಶವೆಂದು ಪಾಪ ಕಳೆದುಕೊಳ್ಳುವುದಕ್ಕೆ ಮಾತ್ರ ಉಪಯೋಗಿಸುವರು.

ಘಾಟ ಗ್ರಾಮದಿಂದ ಐದು ಮೈಲಿ ಬಂದರೆ ಅಲ್ಲಿಂದ ತ್ರಿಯೋಗಿ ನಾರಾಯಣಕ್ಕೆ ಹೋಗುವ ರಸ್ತೆ ಇದೆ. ಇಲ್ಲಿಂದ ನಾಲ್ಕು ಮೈಲಿ ಹತ್ತಿಹೋದರೆ ಅಲ್ಲಿಗೆ ಹೋಗುತ್ತೇವೆ. ಆದರೆ ನಮ್ಮಲ್ಲಿ ಕೆಲವರು ಕೇದಾರನಾಥ ಹತ್ತುವುದಕ್ಕೆ

ನಮ್ಮಲ್ಲಿ ಇರುವ ಶಕ್ತಿಯನ್ನೆಲ್ಲ ಇಟ್ಟುಕೊಳ್ಳೋಣ, ಅಲ್ಲಿಗೆ ಹೋಗುವುದು ಬೇಡ ಎಂದು ಅಭಿಪ್ರಾಯಪಟ್ಟರು. ಆ ಪವಿತ್ರ ಸ್ಥಳಕ್ಕೆ ಕವಲೊಡೆವ ರಸ್ತೆಯಿಂದಲೇ ನಮಸ್ಕರಿಸಿ ಮುಂದೆ ಹೊರಟೆವು.

ತ್ರಿಯೋಗಿನಾರಾಯಣವಲ್ಲಿ ಪಾರ್ವತಿ ಶಿವರಿಗೆ ಲಗ್ನವಾಯಿತೆಂದೂ, ಆ ಸಮಯದಲ್ಲಿ ವಿಷ್ಣು ಬ್ರಹ್ಮಾದಿಗಳೆಲ್ಲ ವಿವಾಹ ಮಹೋತ್ಸವಕ್ಕೆ ಬಂದಿದ್ದರೆಂದೂ ಹೇಳುವರು. ಅವರ ಮದುವೆ ಸಮಯದಲ್ಲಿ ಹತ್ತಿಸಿದ ಹೋಮ ಕುಂಡ ಇನ್ನೂ ಉರಿಯುತ್ತಿದೆ ಎನ್ನುವರು. ಅಂದರೆ ಅದೇ ಕುಂಡಕ್ಕೆ ಇವರು ಪ್ರತಿ ದಿನ ಸೌದೆ ಹಾಕುತ್ತಿರುವರು. ಆ ಹೋಮಕುಂಡದ ಬೂದಿಯಲ್ಲಿ ಏನೋ ವಿಶೇಷ ಮಹತ್ವವಿದೆ ಎನ್ನುವರು. ಯಾವ ಭವವ್ಯಾಧಿ ಪರಿಹಾರವೊ, ಯಾವ ಸ್ವರ್ಗ ಪ್ರಾಪ್ತಿಯೋ ಕಾದಿದೆ ಅದನ್ನು ಧರಿಸಿದವರಿಗೆ !

ಸುಮಾರು ಹತ್ತುಗಂಟೆ ಹೊತ್ತಿಗೆ ಗೌರೀಕುಂಡಕ್ಕೆ ಬಂದೆವು. ಇಲ್ಲಿ ಪೋಸ್ಟ್ ಆಫೀಸು, ಪೋಲೀಸ್ ಸ್ಟೇಷನ್ನು, ಕೆಲವು ಅಂಗಡಿ ಎಲ್ಲಾ ಇವೆ. ಇಲ್ಲಿ ಯಾತ್ರಿಕರ ತಂಡ ಯಾವಾಗಲೂ ಎಲ್ಲಾ ಕಡೆಗಳಿಗಿಂತ ಹೆಚ್ಚು. ಕೇದಾರ ನಾಥಕ್ಕೆ ಹೋಗಿ ಬಂದವರು, ಮತ್ತು ಹೋಗುವರು ಇಬ್ಬರೂ ತಂಗುವ ಸ್ಥಳ ಇದು. ಸುಮಾರು ೬೦೦೦ ಅಡಿಗಳ ಎತ್ತರದಲ್ಲಿದೆ. ಸುತ್ತಲೂ ದೇವದಾರು ಮತ್ತು ಪೈನ್ ಮರಗಳು ದಟ್ಟವಾಗಿ ಬೆಳೆದಿವೆ. ಶೀತಳವಾರಿಯ ಮಂದಾಕಿನಿ ನದಿಗೆ ಕೆಲವು ಗಜಗಳ ಪಕ್ಕದಲ್ಲೇ ಒಂದು ಬಿಸಿ ನೀರಿನ ಕುಂಡವಿದೆ. ಆ ಕುಂಡಕ್ಕೆ ಸುಮಾರು ಮೂರು ಇಂಚು ಅಗಲವಾಗಿರುವ ಗೋಮುಖದಿಂದ ಬಿಸಿ ನೀರು ಬೀಳುತ್ತಿದೆ. ಆ ನೀರು ಎಷ್ಟು ಬಿಸಿಯಾಗಿದೆ ಎಂದರೆ ಅದಕ್ಕೆ ತಲೆಯೊಡ್ಡಿದರೆ ಚೆನ್ನಾಗಿ ಸುಟ್ಟುಹೋಗುವುದು. ಅದರ ಕೆಳಗೆ ನಿಂತು ಸ್ನಾನ ಮಾಡುವುದಕ್ಕೆ ಆಗುವುದಿಲ್ಲ. ಅದು ಕುಂಡಕ್ಕೆ ಬಿದ್ದಮೇಲೆ ಅದರಿಂದ ಒಂದು ಪಾತ್ರೆಯಲ್ಲಿ ತೆಗೆದುಕೊಂಡು ಸ್ನಾನ ಮಾಡುವಾಗ ಹದವಾಗಿರುವುದು. ಆದರೂ ಸ್ವಲ್ಪ ಬಿಸಿಯೆ. ಪ್ರಕೃತಿ ವೈಚಿತ್ರ್ಯ. ಅದರ ಪಕ್ಕದಲ್ಲಿರುವ ಮಂದಾಕಿನಿ ನದಿ ಮುಟ್ಟಿದರೆ ಶೈತ್ಯಾಧಿಕ್ಯದಿಂದ ಕೈಯನ್ನು ಸೆಳೆದುಕೊಳ್ಳಬೇಕಾಗುವುದು. ಗೌರೀ ಕುಂಡಕ್ಕೆ ಬೀಳುವ ನೀರಿನ ಕೆಳಗೆ ಕೈ ಇಟ್ಟರೆ ಉಷ್ಣಾಧಿಕ್ಯದಿಂದ ಕೈ ಸೆಳೆದುಕೊಳ್ಳಬೇಕಾಗುವುದು. ಸ್ನಾನ ಮಾಡುವುದಕ್ಕೆ ಆ ಬಿಸಿ ನೀರನ್ನು ಕಂಡಾಗಂತೂ

ನಮ್ಮ ಆನಂದಕ್ಕೆ ಪಾರವಿರಲಿಲ್ಲ. ಇದುವರೆಗೂ ನಾವು ಎರಡು ಮೂರು ಚೆಂಬು ಕೊರೆದು ಹೋಗುವ ತಣ್ಣೀರಿನಲ್ಲಿ ಸ್ನಾನ ಮಾಡುತ್ತಿದ್ದೆವು. ಈಗ ಮನದಣಿಯೆ ಎಷ್ಟು ಬೇಕಾದರೂ ನೀರನ್ನು ತೆಗೆದುಕೊಂಡು ಸ್ನಾನ ಮಾಡಬಹುದಾಗಿತ್ತು, ಕುಂಡದ ಬುಡದಲ್ಲೆ ಕುಳಿತು ಚೊಂಬಿನಿಂದ ನೀರನ್ನು ಎಷ್ಟು ಹಾಕಿಕೊಂಡರೂ ತೃಪ್ತಿಯಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಮನಸ್ಸಿಲ್ಲದ ಮನಸ್ಸಿನಿಂದ ಎದ್ದು ಬಂದೆ. ಅದಕ್ಕೆ ಸ್ವಲ್ಪ ದೂರದಲ್ಲೆ ಮತ್ತೊಂದು ಕುಂಡ. ಅದನ್ನು ಸೀತಾ ಕುಂಡ ಎನ್ನುವರು. ಅಲ್ಲಿ ಕೂಡ ಆ ಕುಂಡಕ್ಕೆ ಒಂದು ಗೋಮುಖದ ಮೂಲಕ ನೀರು ಬರುತ್ತಿದೆ. ಆದರೆ ಆ ನೀರು ತಣ್ಣಗಿದೆ. ಇಲ್ಲಿ ಯಾತ್ರಿಕರ ಮೇಲೆ ಪಾರ್ವತಿ ಮಮತೆಯೇ ಹೆಚ್ಚು. ಗೌರೀ ಕುಂಡದಲ್ಲಿ ಸ್ನಾನಮಾಡುವ ಜನರೇ ಹೆಚ್ಚು. ಒಂಟೀವರೆ, ಹೆಚ್ಚು ಪುಣ್ಯ ಕಟ್ಟಿಕೊಳ್ಳಬೇಕೆಂದಿರುವವರು ಸಿತಾಕುಂಡದಲ್ಲಿ ಒಂದು ಮುಳುಗು ಹಾಕಿ ಬರುವರು.

ಇಲ್ಲೊಂದು ಗೌರಿಯ ದೇವಸ್ಥಾನವಿದೆ. ಅಲ್ಲಿ ಗೌರಮ್ಮನಿಗೆ ಬೆಟ್ಟದ ಜನ ಉಡುವಂತೆಯೇ ಸೀರೆ ಉಡಿಸಿರುವರು. ಅವರಂತೆಯೇ ನಗನಾಣ್ಯ ಹಾಕಿರುವರು. ಆ ತಾಯಿ ಮೂಗಿಗೆ ಹಾಕಿರುವ ಬಳೆ ಗಲ್ಲಕ್ಕಿಂತ ಕೆಳಗೆ ಬರುತ್ತಿತ್ತು. ಗೋಧಿ ಹೊಲದಲ್ಲಿ ನಾವು ಫೋಟೋ ತೆಗೆದ ಆ ಹುಡುಗಿಯಂತೆ ಇದ್ದಳು ತಾಯಿ ಗೌರಮ್ಮ. ನಾವೇನು ಮಾಡಬಲ್ಲೆವು, ನಮ್ಮಂತೆ ಮಾತ್ರ ನಾವು ದೇವರನ್ನು ಊಹಿಸಿಕೊಳ್ಳಬಲ್ಲೆವು. ನಾವು ಯಾವ ಉಡಿಗೆ ತೊಡಿಗೆ ಹಾಕಿಕೊಳ್ಳುವೆವೊ ಅದನ್ನು ಮಾತ್ರ ಅವನಿಗೆ ಹಾಕಬಲ್ಲೆವು. ಮನುಷ್ಯ ಎಲ್ಲಿಯವರೆಗೆ ಮನುಷ್ಯನಂತೆ ಆಲೋಚಿಸುತ್ತಾನೆಯೊ ಅಲ್ಲಿಯವರೆಗೆ ಅವನ ದೇವರು ಒಬ್ಬ ದೊಡ್ಡಮನುಷ್ಯನೇ ಆಗಿರಬೇಕು. ಆ ದೇವಸ್ಥಾನವಲ್ಲಿರುವಾಗ ಶಂಕರಾಚಾರ್ಯರು ಬರೆದ ಗೌರಿಶತಕ ಜ್ಞಾಪಕಕ್ಕೆ ಬಂತು. ಅದನ್ನು ಮನದಲ್ಲೆ ಹೇಳಿ ನಾಳೆ ಕೇದಾರ ನಾಥದ ಹತ್ತಿರಕ್ಕೆ ಹತ್ತಿ ಹೋಗುವುದಕ್ಕೆ ಶಕ್ತಿ ನೀಡಿ ಆಶೀರ್ವದಿಸಮ್ಮ ಎಂದು ಬೇಡಿ ಹಿಂತಿರುಗಿದೆ.

### ಗೌರೀದಶಕ

ಲೀಲಾಲಬ್ಧ ಸ್ಥಾಪಿತಲುಪ್ತಾಖಿಲ ಲೋಕಾಂ
ಲೋಕಾತೀತೈರ್ಯೋಗಿಭಿರಂತಶ್ಚಿರ ಮೃಗ್ಯಾಂ ।

ಬಾಲಾದಿತ್ಯ ಶ್ರೇಣಿ ಸಮಾನದ್ಯುತಿ ಪುಂಜಾಂ
ಗೌರೀಮಂಬಾ ಮಂಬುರುಹಾಕ್ಷೀಮಹಮೀಡೇ ||೧||

ಪ್ರತ್ಯಾಹಾರಧ್ಯಾನಸಮಾಧಿ ಸ್ಥಿತಿ ಭಾಜಾಂ
ನಿತ್ಯಂ ಚಿತ್ತೇ ನಿವೃತ್ತಿಕಾಷ್ಠಾಂ ಕಲಯಂತೀಂ ।
ಸತ್ಯ ಜ್ಞಾನಾನಂದಮಯೀಂ ತಾಂ ತನುರೂಪಾಂ
ಗೌರೀಮಂಬಾ ಮಂಬರುಹಾಕ್ಷೀಮಹಮೀಡೆ ||೨||

ಚದ್ರಾಪೀಡಾನಂದಿತ ಮಂದಸ್ಮಿತ ವಕ್ತ್ರಾ
ಚಂದ್ರಾಪೀಡಾಲಂಕೃತ ನೀಲಾಲಕಭಾರಾಂ ।
ಇಂದ್ರೋಪೇಂದ್ರಾದ್ಯರ್ಚಿತ ಪಾದಾಂಬುಜ ಯುಗ್ಮಾಂ
ಗೌರೀಮಂಬಾಮಂಬರುಹಾಕ್ಷೀಮಹಮೀಡೆ ||೩||

ಆದಿಕ್ಷಾಂತಾಮಕ್ಷರಮೂರ್ತ್ಯಾ ವಿಲಸಂತೀಂ
ಭೂತೇ ಭೂತೇ ಭೂತಕದಂಬ ಪ್ರಸವಿತ್ರೀಂ ।
ಶಬ್ದ ಬ್ರಹ್ಮಾನಂದಮಯೀಂ ತಾಂ ತಟಿದಾಭಾಂ
ಗೌರೀಮಂಬಾ ಮುಂಬರುಹಾಕ್ಷೀಮಹಮೀಡೆ ||೪||

ಮೂಲಾಧಾರದುತ್ಥಿತ ವೀಥ್ಯಾ ವಿಧಿರಂಧ್ರಂ
ಸೌರಂ ಚಾಂದ್ರಂ ವ್ಯಾಪ್ಯವಿಹಾರಜ್ವಲಿತಾಂಗೀಂ ।
ಯೇಯಂ ಸೂಕ್ಷ್ಮಾತ್ಸೂಕ್ಷತನುಸ್ತಾಂ ಸುಖ ರೂಪಾ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ||೫||

ನಿತ್ಯಃ ಶುದ್ಧೋ ನಿಷ್ಕಲ ಏಕೊ ಜಗದೀಶಃ
ಸಾಕ್ಷೀ ಯಸ್ಯಾಃ ಸರ್ಗವಿಧೌ ಸಂಹರಣೇ ಚ ।
ವಿಶ್ವತ್ರಾಣ ಕ್ರೀಡನ ಲೋಲಾಂ ಶಿವಪತ್ನೀಂ
ಗೌರೀಮಂಬಾಮುಂಬುರು ಹಾಕ್ಷೀ ಮಹಮೀಡೇ ||೬||

ಯಸ್ಯಾಃ ಕುಕ್ಷೌ ಲೀನಮಖಂಡಂ ಜಗದಂಡಂ
ಭೂಯೋ ಭೂಯಃ ಪ್ರಾದುರಭೂದುತ್ಥಿತಮೇವ ।

ಪತ್ಯಾ ಸಾರ್ಧಂ ತಾಂ ರಜತಾದ್ರೌ ವಿಹರಂತೀಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ||೭||

ಯಸ್ಯಾಮೋತಂ ಪ್ರೋತಮಶೇಷಂ ಮಣಿಮಾಲಾ
ಸೂತ್ರೇ ಯದ್ವತ್ಕ್ವಾಪಿ ಚರಂ ಚಾಪ್ಯಚರಂ ಚ |
ತಾಮಾಧ್ಯಾತ್ಮ ಜ್ಞಾನ ಪದವ್ಯಾ ಗಮನೀಯಾಂ
ಗೌರೀಮಂಬಾಮಂಬರುಹಾಕ್ಷೀಮಹಮೀಡೇ ||೮||

ನಾನಾಕಾರೈಃ ಶಕ್ತಿಕದಂಬೈರ್ಭುವನಾನಿ
ವ್ಯಾಪ್ಯಂ ಸ್ವೈರಂ ಕ್ರೀಡತಿ ಯೇಯಂ ಸ್ವಯಮೇಕಾ |
ಕಲ್ಯಾಣೀ ತಾಂ ಕಲ್ಪಲತಾಮಾನತಿಭಾಜಾಂ
ಗೌರೀಮಂಬಾಮಂಬುರುಹಾಕ್ಷೀಮಹಮೀಡೇ ||೯||

ಆಶಾಪಾಶಕ್ಲೇಶವಿನಾಶಂ ವಿದಧಾನಂ
ಪದಾಂಭೋಜಧ್ಯಾನಪರಾಣಾಂ ಪುರುಷಾಣಾಂ |
ಈಶಾಮೀಶಾರ್ಧಾಂಗಹರಾಂ ತಾಮಭಿರಾಮಾಂ
ಗೌರೀಮಂಬಾಮಂಬರುಹಾಕ್ಷೀಮಹಮೀಡೆ ||೧೦||

೧. ಯಾರು ಸಮಸ್ತ ಜಗತ್ತಿನ ಸೃಷ್ಟಿ–ಸ್ಥಿತಿ–ಲಯವನ್ನು ಲೀಲಾಜಾಲವಾಗಿ ಮಾಡುತ್ತಾಳೆಯೋ, ಯಾರನ್ನು ಲೋಕಾತೀತರಾದ ಯೋಗಿಗಳು ತಮ್ಮ ಹೃದಯದಲ್ಲಿ ಹುಡುಕಲೆತ್ನಿಸುತ್ತಾರೆಯೊ, ಯಾರ ಕಾಂತಿಯು ಬಾಲ ಸೂರ್ಯನ ಕಿರಣಗಳಂತೆ ಹೊಳೆಯುತ್ತದೆಯೋ ಅಂತಹ ಕಮಲನೇತ್ರೆ, ಗೌರೀ ಮಾತೆಯನ್ನು ಸ್ತುತಿಸುವೆನು.

೨. ಯಾರು ಪ್ರತ್ಯಾಹಾರ-ಧ್ಯಾನ-ಸಮಾಧಿಗಳಲ್ಲಿ ನಿರತರಾಗಿರುವ ಯೋಗಿಗಳ ಚಿತ್ತದಲ್ಲಿ ಸದಾ ಪರಮಾನಂದವನ್ನು ಬೀರುತ್ತಾಳೆಯೊ, ಅಂತಹ ಸತ್ಯ-ಜ್ಞಾನ-ಆನಂದಸ್ವರೂಪಳಾದ, ಸೂಕ್ಷ್ಮರೂಪಿನ ಕಮಲ ನೇತ್ರೆ ಗೌರೀ ಮಾತೆಯನ್ನು ಸ್ತುತಿಸುವೆ.

೩. ಯಾರ ಮಂದಹಾಸಯುಕ್ತ ಶ್ರೀಮುಖವು ಶಿವನನ್ನು ಆನಂದಗೊಳಿಸುತ್ತದೆಯೊ, ಯಾರ ನೀಲ ಕೇಶರಾಶಿ ಚಂದ್ರಾಪೀಡವೆಂಬ ಆಭರಣದಿಂದ

ಶೋಭಿಸುವುದೊ, ಯಾರ ದಿವ್ಯ ಪಾದಕಮಲದ್ವಯಗಳು ಇಂದ್ರ-ಉಪೇಂದ್ರರಿಂದ ಪೂಜಿಸಲ್ಪಡುತ್ತವೆಯೊ, ಅಂತಹ ಕಮಲನೇತ್ರೆ ಗೌರೀಮಾತೆಯನ್ನು ಸ್ತುತಿಸುವೆ.

೪. ಯಾರು 'ಅ' ಕಾರದಿಂದ 'ಕ್ಷ' ಕಾರದ ವರೆಗಿನ ಸಮಸ್ತ ವರ್ಣಮಾಲೆಯ ಮೂರ್ತಸ್ವರೂಪಳಾಗಿ ವಿರಾಜಿಸುತ್ತಾಳೆಯೊ, ಯಾರು ಪ್ರತಿಯೊಂದು ವಿಧದ ಪ್ರಾಣಿವರ್ಗದಲ್ಲಿಯೂ ಆಯಾ ವರ್ಗದ ಪ್ರಾಣಿ ಸಂತತಿಗೆ ಜನ್ಮದಾತೆಯೊ, ಅಂತಹ ವಿದ್ಯುಜ್ಜಟಾಪ್ರಭೆಯಿಂದ ಕೂಡಿದ ಶಬ್ದಬ್ರಹ್ಮಾನಂದಭೂತಳಾದ ಕಮಲನೇತ್ರೆ ಗೌರೀಮಾತೆಯನ್ನು ಸ್ತುತಿಸುವೆ.

೫. ಯಾರು ಮೂಲಾಧಾರದಿಂದ ಬ್ರಹ್ಮರಂಧ್ರ (ಸಹಸ್ರಾರ) ದ ವರೆಗೆ ಪಸರಿಸಿರುವ ಸುಷುಮ್ನಾನಾಡೀಪಥವನ್ನು ಅದರ ಎಡ-ಬಲಗಳಲ್ಲಿರುವ ಇಡಾ-ಪಿಂಗಲಾ ನಾಡಿಗಳನ್ನು ವ್ಯಾಪಿಸಿ ಜಾಜ್ವಲ್ಯಮಾನಳಾಗಿ ವಿಹರಿಸುತ್ತಾಳೆಯೊ, ಯಾರು ಈ ಬಗೆಯಲ್ಲಿ ಸೂಕ್ಷ್ಮಗಳಲ್ಲಿಯೂ ಕಡು ಸೂಕ್ಷ್ಮವೆನಿಸುವ ಶರೀರವುಳ್ಳವಳೊ ಮತ್ತು ಸುಖಸ್ವರೂಪಳೊ, ಅಂತಹ ಕಮಲನೇತ್ರೆ ಗೌರೀಮಾತೆಯನ್ನು ಸ್ತುತಿಸುವೆ.

೬. ನಿತ್ಯನೂ ಶುದ್ಧನೂ ನಿರವಯವನೂ ಏಕೈಕನೂ ಆದ ಜಗದೀಶ್ವರನು ಯಾರ ಸೃಷ್ಟಿ-ಸ್ಥಿತಿ-ಸಂಹಾರಕಾರ್ಯಗಳ ಸಾಕ್ಷಿಯೊ, ಯಾರು ವಿಶ್ವರಕ್ಷಣೆಯ ಕ್ರೀಡೆಯಲ್ಲಿ ರಮಿಸುತ್ತಾಳೆಯೋ, ಅಂತಹ ಶಿವನರ್ಧಾಂಗಿ ಕಮಲನೇತ್ರೆ ಗೌರೀಮಾತೆಯನ್ನು ಸ್ತುತಿಸುವೆ.

೭. ಯಾರ ಗರ್ಭದಲ್ಲಿ ಈ ಅಖಂಡ ಬ್ರಹ್ಮಾಂಡವು ಅಡಕವಾಗಿದ್ದು ಪುನಃ ಪುನಃ ಉದ್ಭವವಾಗುತ್ತದೆಯೋ, ಯಾರು ತನ್ನ ಪತಿಯಾದ ಶಿವನೊಡನೆ ರಜತಗಿರಿಯಲ್ಲಿ, ಕೈಲಾಸದಲ್ಲಿ ವಿಹರಿಸುತ್ತಾಳೆಯೊ, ಅಂತಹ ಕಮಲನೇತ್ರೆ ಗೌರೀಮಾತೆಯನ್ನು ಸ್ತುತಿಸುವೆ.

೮. ಯಾರಲ್ಲಿ ಸಕಲ ಚರಾಚರ ವಸ್ತುಗಳು ದಾರದಲ್ಲಿ ಪೋಣಿಸಿದ ಮಣಿಗಳಂತೆ ಓತಪ್ರೋತವಾಗಿ ನೆಲಿಸಿವೆಯೊ,ಯಾರನ್ನು ಅಧ್ಯಾತ್ಮ ಜ್ಞಾನಪಥದ ಮೂಲಕ ಹೊಂದಬಹುದೊ, ಅಂತಹ ಕಮಲನೇತ್ರೆ ಗೌರೀಮಾತೆಯನ್ನು ಸ್ತುತಿಸುವೆ.

೯. ಯಾರು ಬಹುವಿಧ ರೂಪಗಳಿಂದ ಮತ್ತು ನಾನಾಬಗೆಯ ಶಕ್ತಿ ಸಮೂಹಗಳಿಂದ ಚತುರ್ದಶ ಭುವನಗಳನ್ನು ವ್ಯಾಪಿಸಿ ಒಬ್ಬಳೇ ಸ್ವೇಚ್ಛೆಯಿಂದ ನಿರಾತಂಕವಾಗಿ ಕ್ರೀಡಿಸುತ್ತಾಳೆಯೊ, ಅಂತಹ ಕಲ್ಯಾಣಮಯಿಯೂ ಶರಣಾಗತರಿಗೆ ಕಲ್ಪಲತಾಸದೃಶಳೂ ಆದ ಕಮಲನೇತ್ರೆ ಗೌರೀಮಾತೆಯನ್ನು ಸ್ತುತಿಸುವೆ.

೧೦. ಯಾರು ತನ್ನ ಚರಣಕಮಲಗಳಲ್ಲಿ ಧ್ಯಾನಾಸಕ್ತರಾದ ಮನುಷ್ಯರ ಆಶಾಪಾಶಗಳನ್ನು ಕಿತ್ತೊಗೆದು ಅವರ ಕಷ್ಟ-ಸಂಕಟಗಳನ್ನು ದೂರಮಾಡುವಳೊ, ಯಾರು ಈಶ್ವರನರ್ಧಾಂಗವನ್ನಾಕ್ರಮಿಸಿ ಜಗದೊಡತಿಯಾಗಿ ಲೋಕದ ಕಣ್ಣುಗಳಿಗೆ ಹಬ್ಬವಾಗಿದ್ದಾಳೆಯೊ, ಅಂತಹ ಕಮಲನೇತ್ರೆ ಗೌರೀಮಾತೆಯನ್ನು ಸ್ತುತಿಸುವೆ.

೧೦

# ಕೇದಾರನಾಥ

೧೬ನೇ ತಾರೀಖು ಭಾನುವಾರ ಬೆಳಿಗ್ಗೆ ಬೇಗ ಎದ್ದೆವು. ಇಂದೇ ನಮ್ಮ ಕಷ್ಟದ ಪ್ರಯಾಣದ ದಿನ. ಇದುವರೆಗೆ ನಾವು ಹತ್ತಿದ ಏರುಪೇರುಗಳೆಲ್ಲ ಮಕ್ಕಳಾಟ, ಇನ್ನುಮೇಲೆ ನಾವು ಹತ್ತಬೇಕಾಗಿರುವುದರೊಡನೆ ಹೋಲಿಸಿ ನೋಡಿದರೆ. ಗೌರೀಕುಂಡ ಸಮುದ್ರ ಮಟ್ಟಕ್ಕೆ ಆರು ಸಾವಿರ ಅಡಿ ಎತ್ತರದಲ್ಲಿದೆ. ಅಲ್ಲಿಂದ ಮೂರುವರೆ ಮೈಲಿ ರಂಭಾರ ಎನ್ನುವ ಗ್ರಾಮಕ್ಕೆ. ಅದು ಸಮುದ್ರ ಮಟ್ಟಕ್ಕೆ ಎಂಟುಸಾವಿರ ಅಡಿ ಎತ್ತರದಲ್ಲಿದೆ. ಮೂರುವರೆ ಮೈಲಿಯಲ್ಲಿ ಎರಡು ಸಾವಿರ ಅಡಿ ಹತ್ತಬೇಕು. ಅಲ್ಲಿಂದ ಎರಡೂವರೆ ಮೈಲಿ ವಿಪರೀತ ಕಡಿದು. ಆ ಎರಡೂವರೆ ಮೈಲಿಯಲ್ಲಿ ನಾಲ್ಕುಸಾವಿರ ಅಡಿಗಳನ್ನು ಹತ್ತಿ ಹೋಗಬೇಕು. ಅದಕ್ಕೆ ಎಲ್ಲಾ ದೇವರ ಹರಕೆಯ ಬಲ ಬೇಕು. ಬೆಳಿಗ್ಗೆ ಚೆನ್ನಾಗಿ ತಿಂಡಿ ತಿಂದು ಹೊರಟೆವು. ದಾರಿಯಲ್ಲಿ ಬಾಯಾರಿಕೆ ಆದರೆ ತಿನ್ನುವುದಕ್ಕೆಂದು ಪೆಪ್ಪರ್ ಮೆಂಟ್ ಕಟ್ಟಿಕೊಂಡೆವು. ಒಣಗಿಸಿದ ಮಾವಿನಕಾಯಿ ಚೂರು ಗೌರೀಕುಂಡದ ಅಂಗಡಿಯಲ್ಲಿ ಸಿಕ್ಕಿತು. ಅದನ್ನು ಸ್ವಲ್ಪ ತೆಗೆದುಕೊಂಡು ಜೇಬಿನಲ್ಲಿ ಇಟ್ಟು ಕೊಂಡೆ. ಬೆಳಿಗ್ಗೆ ಐದು ಗಂಟೆಗೆ ಗೌರಿಗೆ ನಮಿಸಿ ದಾರಿಯಲ್ಲೇ ಸಿಕ್ಕುವ ವಿಘ್ನೇಶ್ವರನಿಗೆ ಅಡ್ಡಬಿದ್ದು ಹೊರಟೆವು. ಗೌರೀಕುಂಡದಿಂದ ಹೊರಟಾಗ ಚಳಿಯಾಗುತ್ತಿತ್ತು. ಸ್ವೆಟರ್, ಟೋಪಿ ಮುಂತಾದುವನ್ನೆಲ್ಲ ಹಾಕಿಕೊಂಡಿದ್ದೆವು. ಆದರೆ ಹತ್ತಿಕೊಂಡು ಹೋಗುವಾಗ ಮೈ ಬೆವರಿ ದೇಹ ಕಾವಿನಿಂದ ಉರಿಯ ತೊಡಗಿತು. ಮೈಮೇಲೆ ಹಾಕಿಕೊಂಡ ಬೆಚ್ಚನೆ ಬಟ್ಟೆಯನ್ನೆಲ್ಲ ಬಿಚ್ಚಿ ಹೆಗಲ

ಮೇಲೆ ಹಾಕಿಕೊಂಡು ಕೋಲೂರಿಕೊಂಡು ಶಿವಚಿಂತನೆ ಮಾಡುತ್ತ ಹೊರಟಿವು. ಯಾತ್ರೆ ಪೂರೈಸಿಕೊಂಡು ಮುದುಕಿಯೊಬ್ಬಳು ಆಗಲೆ ಹಿಂತಿರುಗುತ್ತಿದ್ದಳು. ದಣಿದು ದಣಿದು ಮೆಲ್ಲಡಿ ಇಡುವ ನಮ್ಮನ್ನು ನೋಡಿ "ಜೈ ಕೇದಾರನಾಥ್‌ಕಿ ಜೈ" ಎಂದಳು. ಆಕೆ ಮೊಗ ಸುಕ್ಕಾಗಿತ್ತು. ನೋಡಿದರೆ ವಯಸ್ಸು ಸುಮಾರು ಎಪ್ಪತ್ತರ ಹತ್ತಿರ ಇರಬಹುದು. "ನೀವು ಹೇಗೆ ಹೋದಿರಿ, ಕುದುರೆಯ ಮೇಲೆಯೋ? ಕಂಡಿಯ ಮೇಲೆಯೆ?" ಎಂದು ಕೇಳಿದರು ನಮ್ಮವರಲ್ಲೊಬ್ಬರು. ಆಕೆ "ನಡೆದುಕೊಂಡೇ ಹೋಗಿ ಬಂದೆ" ಎಂದಳು. ನಾವು ಕೇವಲ ದೇಹದ ಶಕ್ತಿಯಿಂದಲೇ ಅದನ್ನು ಹತ್ತಿ ಹೋಗುತ್ತೇವೆ ಎಂದು ತಿಳಿದುಕೊಂಡಿದ್ದೆವು. ಆದರೆ ಆ ದೇಹವನ್ನು ಚಲಿಸುವಂತೆ ಮಾಡುವ ಒಂದು ಇಚ್ಛಾಶಕ್ತಿಗೆ ದೇಹ ಆಳು ಎಂಬುದನ್ನು ಮರೆಯುವೆವು. ಈಕೆಯೆ ಅದನ್ನು ಹತ್ತಿ ಬಂದರೆ ನಾವು ವಾಹನದ ಮೇಲೆ ಕುಳಿತು ಕೊಳ್ಳುವುದು ನಗೆಗೇಡು ಎನ್ನಿಸಿತು. ಆ ಮುದುಕಿಯ ದರ್ಶನ ಸೋತ ನಮ್ಮ ಕಾಲಿಗೆ ಹೊಸಶಕ್ತಿ ಬರುವಂತೆ ಮಾಡಿತು.

ಇಲ್ಲಿಂದ ಮುಂದಕ್ಕೆ, ಕೇದಾರನಾಥದವರೆಗೆ, ಇಡೀ ನಮ್ಮ ಯಾತ್ರೆಯಲ್ಲಿ ದೊರಕುವ ಅತಿ ರಮ್ಯದೃಶ್ಯಗಳು ಕಾಣುವುವು. ದಾರಿಯ ಎಡಬಲಗಳಲ್ಲಿ ಮದ್ದಾನೆಗಳಂತೆ ಬಿದ್ದಿವೆ, ಭೀಮಾಕಾರದ ಮಂಜಿನ ರಾಶಿ. ಕೆಲವು ವೇಳೆ ಮಂದಾಕಿನಿ ನದಿ ಮಂಜಿನ ಕೆಳಗೆ ನೂರು ಇನ್ನೂರು ಅಡಿ ಹರಿದು ಮತ್ತೊಂದು ಕಡೆಯಿಂದ ಏಳುವುದು. ಅನೇಕ ಗಿರಿ ಝರಿಗಳು, ಕೆಲವು ಸಣ್ಣವು, ಕೆಲವು ದೊಡ್ಡವು–ಬೆಟ್ಟದಿಂದ ಬೀಳುತ್ತಿರುತ್ತವೆ. ಕೆಲವು ವೇಳೆ ಸಣ್ಣ ಝರಿಗಳು ನರ್ತಕಿಯಂತೆ ಹಾವ ಭಾವ ವಿಲಾಸದಿಂದ ಹರಿದು ಮಂದಾಕಿನಿಗೆ ಸೇರುವುವು. ಮತ್ತೆ ಕೆಲವು ಭೀಮಾಕಾರದ ಪ್ರಪಾತಗಳು ಮುನ್ನೂರು ನಾನೂರು ಅಡಿ ಒಂದು ನೆಗೆತದಲ್ಲಿ ಹಾರುವುವು. ಏನು ರಭಸ, ಎಷ್ಟೊಂದು ನೀರು; ಶಿವನ ತಾಂಡವನೃತ್ಯವನ್ನು ನೆನಪಿಗೆ ತರುವುದು! ಶಿವನ ಭಸ್ಮಭೂಷಿತಾಂಗವನ್ನು ತೊಳೆದು ಆ ಬಣ್ಣವನ್ನೆ ಹೊತ್ತುಕೊಂಡು ಬಂದಂತೆ ಇದೆ, ಆಗತಾನೆ ಹಿಮದಿಂದ ಕರಗಿ ಬರುತ್ತಿರುವ ನೀರು. ಈ ದೃಶ್ಯಗಳ ಮೇಲೆಲ್ಲ ಸೂರ್ಯನ ಕಿರಣಗಳು ಬಿದ್ದಾಗಲಂತೂ ನಮ್ಮನ್ನು ಬೇರೊಂದು ಲೋಕಕ್ಕೇ ಒಯ್ಯುವುದು. ಏನು ರಂಗು, ಏನು ಭಂಗಿ, ಎಂತೆಂತಹ ರಚನೆಗಳನ್ನು ನಿರ್ಮಿಸಿಕೊಂಡು ಹರಿದಾಡು

ವುದು! ನೀರು ರವಿಕಿರಣದಲ್ಲಿ ಬಂಡೆಗಳ ಮೇಲೆ ಉರುಳುವಾಗ. ಈ ಅದ್ಭುತ ಜಲಕಲೆಯು ವಸ್ತುಪ್ರದರ್ಶನಾಲಯದಲ್ಲಿ ನಿಂತಾಗ ನಮ್ಮ ಕೃಷ್ಣರಾಜಸಾಗರದ ಹಿಂದೆ ಇರುವ ಬೃಂದಾವನ ಜ್ಞಾಪಕಕ್ಕೆ ಬಂತು. ಅದೆಷ್ಟು ಅಲ್ಪ, ಅದೆಷ್ಟು ಕೃತಕ. ಹಿಂದೆ ಸ್ವಾಮಿ ವಿವೇಕಾನಂದರ ಶಿಷ್ಯರೊಬ್ಬರು ಬಣ್ಣ ಬಣ್ಣದ ಬೆಳಕಿನಲ್ಲಿ ಬೆಳಗುವ ಈ ಕೃತಕ ಚೆಲುವೆಯನ್ನು ನೋಡಿದಾಗ, ಅವರನ್ನು ಹತ್ತಿರ ಇದ್ದವರು ಹೇಗಿದೆ ಇದು ಎಂದು ಕೇಳಿದರು. ಆಕೆ ತಕ್ಷಣ ಉತ್ತರ ಕೊಟ್ಟಳು. "ಒಂದು ದಿನದ ಸೂರ್ಯಾಸ್ತಮಯ ಇದಕ್ಕಿಂತ ಸಾವಿರಪಾಲು ಸುಂದರವಾಗಿರುವುದು" ಎಂದು. ಹಿಮಾಲಯದ ಶಿವನ ಕಲಾಶಾಲೆಯ ಕೃತಿಗಳೊಡನೆ ಮಾನವನ ಕೃತಕ ಕಲೆಯನ್ನು ಹೋಲಿಸುವುದೆಂತು? ಇವೆಲ್ಲ ಭೂಮಮಯ, ನಮ್ಮದೆಲ್ಲ ಅಲ್ಪ. ಇವೆಲ್ಲ ಸತ್ಯ ಶಿವ ಸುಂದರವನ್ನು ಜ್ಞಾಪಕಕ್ಕೆ ತರುವ ಚಿಹ್ನೆಗಳು. ನಮ್ಮವು ಪ್ರಪಂಚದ ಆಸೆಯನ್ನು ಕ್ಷಣಕಾಲ ಕೆರಳಿಸಿ ಮರಳಿಸುವಂತಹವು. ಹಿಮಾಲಯದಲ್ಲಿ ನಾವು ನಡೆಯುತ್ತಿರುವ ಈ ತಾಣ ಶಿವಮಯವಾಗಿತ್ತು.

ಸುಮಾರು ಮೂರುವರೆ ಮೈಲಿ ನಡೆದು ರಂಭಾರ ಎನ್ನುವ ಊರಿಗೆ ಬಂದೆವು, ಇಲ್ಲಿ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು ದಾರಿಯ ಪಕ್ಕದಲ್ಲಿದ್ದ ಅಂಗಡಿಯಲ್ಲಿ ಟೀಯನ್ನು ಕುಡಿದೆವು. ಇಲ್ಲಿಂದ ಕೇದಾರನಾಥಕ್ಕೆ ಮೂರುವರೆ ಮೈಲಿಗಳು. ಅದರಲ್ಲಿ ಕೊನೆಯ ಒಂದು ಮೈಲಿ ಸಮನಾದ ನೆಲದಮೇಲೆ ಹೋಗಬೇಕು. ಉಳಿದ ಎರಡುವರೆ ಮೈಲಿ ಏರುತ್ತಲೇ ಹೋಗಬೇಕು. ಆ ಎರಡೂವರೆ ಮೈಲಿಯಲ್ಲಿ ನಾಲ್ಕು ಸಾವಿರ ಅಡಿ ಹತ್ತಬೇಕು. ಕೊನೆಯ ಸಾಹಸಕ್ಕೆ ನಮ್ಮ ಶಕ್ತಿಯನ್ನೆಲ್ಲಾ ಅಲ್ಲಿ ಕುಳಿತು. ಶೇಖರಿಸುತ್ತಿದ್ದೆವು. ಅಷ್ಟು ಹೊತ್ತಿಗೆ ನಮಗೆ ಚಂದ್ರಪುರಿಯಲ್ಲಿ ಸಿಕ್ಕಿದ ಬಂಗಾಳಿಬಾಬುಗಳ ತಂಡ ಕೇದಾರನಾಥದಿಂದ ಹಿಂತಿರುಗಿ ಬರುತ್ತಿದ್ದುದು ಗೋಚರಿಸಿತು. ಅವರೊಡನೆ ಕುಶಲಪ್ರಶ್ನೆಗಳಾದವು. ಚಂದ್ರಪುರಿಯಲ್ಲಿ ಅವರಲ್ಲಿ ಕಂಡ ಉತ್ಸಾಹ ಈಗ ಆಗಲೆ ಇಳಿಮುಖವಾಗಿತ್ತು. ಒಬ್ಬರು ಕುಳಿತು ಹೋಗುತ್ತಿದ್ದ ದಂಡಿ ಮುರಿದುಹೋಗಿತ್ತು. ಮತ್ತೊಬ್ಬರು ದಂಡಿಯಲ್ಲಿ ಕುಳಿತು ಬೇಜಾರಾಗಿ ಕುದುರೆಯ ಮೇಲೆ ಹೋಗುತ್ತಿದ್ದಾಗ

ಹಿಮದ ಮೇಲೆ ಕುದುರೆಯಿಂದ ಬಿದ್ದು ಕೈಗೆ ಮೈಗೆ, ಬ್ಯಾಂಡೇಜ್ ಕಟ್ಟಿಕೊಂಡಿದ್ದರು. ಸಧ್ಯಕ್ಕೆ ಎಂದಿಗೆ ಊರು ಸೇರೇವು ಎನ್ನಿಸಿತ್ತು ಅವರಿಗೆ.

ಐವತ್ತು ಅರವತ್ತು ಗಜಗಳು ಹತ್ತಿ ಹೋಗುವುದರಲ್ಲಿ ದಣಿವಾಗುವುದು, ಬಾಯಾರುವುದು. ಹತ್ತಿರಿದ್ದ ಪೆಪ್ಪರ್‌ಮಿಂಟ್ ಮುಗಿಯಿತು, ಒಣಗಿದ ಮಾವಿನ ಕಾಯಿ ಮುಗಿಯಿತು. ಮುಂದೆ ನೋಡಿದರೆ ನಿಂತಿದೆ ನಮ್ಮನ್ನು ಅಣಕಿಸುವುದಕ್ಕೆ ಏರಿನ ರಾಕ್ಷಸ. ಇನ್ನೂ ಇದೆಯಲ್ಲ ಇಷ್ಟೊಂದು ಹತ್ತುವುದಕ್ಕೆ ಎನ್ನಿಸುವುದು. ದಣಿವಾದಾಗ ಮುಂದೆ ನೋಡಬೇಡ, ಹಿಂದೆ ನೋಡು ಎಂದು ಸ್ವಾಮಿ ವಿವೇಕಾನಂದರಿಗೆ ಹಿಮಾಲಯವನ್ನು ಹತ್ತಿ ಹೋಗುತ್ತಿದ್ದಾಗ ಒಬ್ಬ ಪಥಿಕ ಕೊಟ್ಟ ಬುದ್ಧಿವಾದ ಜ್ಞಾಪಕಕ್ಕೆ ಬಂತು. ಹಿಂದೆ ನೋಡಿದಾಗ ನಾವು ಇಷ್ಟೊಂದನ್ನು ಹತ್ತಿ ಬಂದಿರುವೆವು, ಎಂದು ನಾವು ಸಾಧಿಸಿದುದನ್ನು ನೆನಪಿಗೆ ತರುವುದು. ಆಗ ಇಷ್ಟೊಂದನ್ನು ಹತ್ತಿ ಬಂದಿರುವವನು ಮುಂದಿನದನ್ನು ಹತ್ತಲಾರನೆ ಎಂಬ ಧೈರ್ಯ ಕೊಡುವುದು. ಜೀವನದಲ್ಲಿಯೂ ಹೀಗೆಯೇ. ಯಾವುದೋ ಒಂದು ಅಪಾಯವನ್ನು ಎದುರಿಸುವಾಗ ತಲ್ಲಣಿಸುವೆವು. ನಿಜವಾಗಿ ನಾವು ಇದರಿಂದ ಪಾರಾಗಬಲ್ಲೆವೆ ಎಂದು ಯೋಚಿಸುವೆವು. ಆಗ ನಮ್ಮ ಜೀವನದ ಹಿಂದಿನದನ್ನು ಜ್ಞಾಪಿಸಿ ಕೊಂಡರೆ, ಇದುವರೆಗೆ ಎಂತೆಂತಹ ಕಷ್ಟದಿಂದ ಪಾರಾಗಿ ಬಂದಿರುವೆವು, ಎಂತೆಂತಹ ಅಪಾಯವನ್ನು ಸಹಿಸಿರುವೆವು, ಅದರಂತೆಯೇ ಇದೂ ಸಾಗಿ ಹೋಗುವುದು ಎಂಬ ಧೈರ್ಯ ಬರುವುದು.

ಮುಂದೆ ನಡೆದು ಸಾಕಾದಾಗ ನಿಂತು ಹಿಂದಿರುವ ಸೌಂದರ್ಯವನ್ನು ನೋಡುತ್ತಿದ್ದೆ. ಭಗನಿ ನಿವೇದಿತೆ ಕೇದಾರನಾಥಕ್ಕೆ ಬಂದಾಗ ಅವಳು ಈ ಸ್ಥಳವನ್ನು ಕುರಿತು ಹೀಗೆ ಬರೆಯುತ್ತಾಳೆ : This climb is as hard life itself ". ಅದು ಮನಸ್ಸಿಗೆ ಚೆನ್ನಾಗಿ ನಾಟಿತು. ಜೀವನದಲ್ಲಿ ನಮ್ಮನ್ನು ಎದುರಿಸಲು ಎಷ್ಟು ಸಂಕಟ ಕಷ್ಟಗಳು ಹೆಜ್ಜೆ ಹೆಜ್ಜೆಗೆ ಕಾದು ಕುಳಿತಿವೆ. ಇದನ್ನು ಅನುಭವಿಸುವಾಗ ಎಂತಹ ದಾರುಣವ್ಯಥೆ ಪಡಬೇಕಾಗುವುದೊ ನಾವು. ಆದರೆ ಇದನ್ನೆಲ್ಲ ಅನುಭವಿಸಿದ ಮೇಲೆ, ಅದನ್ನೇ ನಾವು ಪುನಃ ಸಾಕ್ಷಿಯಂತೆ ವಿಭಜನೆ ಮಾಡುವಾಗ ಪ್ರತಿಯೊಂದೂ ನಮ್ಮ ಶೀಲವನ್ನು ತಿದ್ದಿದೆ, ಪ್ರತಿಯೊಂದರಿಂದಲೂ ನಾವು ಪ್ರಯೋಜನ ಪಡೆದಿರುವೆವು ಎನ್ನುವುದು ಗೊತ್ತಾಗುವುದು. ಎರಡೂವರೆ,

ಮೈಲಿ ನಡೆಯಲು ನಮಗೆ ಸುಮಾರು ಎರಡುವರೆ ಗಂಟೆಯೇ ಹಿಡಿಯಿತು. ದಾರಿಯಲ್ಲಿ ಅನೇಕ ಕಡೆ ನಾವು ಹಿಮದ ಮೇಲೆಯೇ ನಡೆದುಕೊಂಡು ಹೋಗ ಬೇಕು. ಆಗ ಕೈಯಲ್ಲಿರುವ ಕೋಲು ಅತ್ಯಂತ ಸಹಕಾರಿ. ಅದನ್ನು ಮುಂದೆ ಊರಿಕೊಂಡು ಹೋಗಬೇಕಾಗುವುದು. ಸ್ವಲ್ಪ ಜಾರಿದರೆ, ಉರುಳಿ ಬಿದ್ದರೆ, ಪಕ್ಕದಲ್ಲಿ ಹರಿಯುವ ಮಂದಾಕಿನಿ ನದಿಯ ಪಾಲೆ. ಆ ಹಿಮದ ಮೇಲೆ ಜನ ಬರಿಯ ಕಾಲಿನಲ್ಲಿ ನಿಂತು ಅದನ್ನು ಅಗೆದು ರಸ್ತೆ ಮಾಡುತ್ತಿದ್ದರು. ಅವರು ಆ ಚಳಿಯನ್ನು ಹೇಗೆ ಸಹಿಸುತ್ತಿದ್ದರೊ ದೇವರೆ ಬಲ್ಲ. ನಾವು ಬೂಟ್ಸ್ ಹಾಕಿ ಕೊಂಡಿದ್ದರೂ ಸ್ವಲ್ಪ ಹೊತ್ತು ಹೆಚ್ಚಾಗಿ ಹಿಮದ ಮೇಲೆ ನಿಂತರೆ ಕಾಲು ಸೇದಿ ಹೋಗುತ್ತಿತ್ತು. ಆದರೆ ಆ ಜನರಿಗೆ ಇದು ಅಭ್ಯಾಸವಾಗಿ ಹೋಗಿದೆ. ಅಭ್ಯಾಸ ಏನನ್ನೂ ಬೇಕಾದನೂ ಮಾಡಿಸಬಲ್ಲದು ಎಂದುಕೊಂಡೆ.

ಹತ್ತಿಕೊಂಡು ದೇವದರ್ಶಿನಿ ಎನ್ನುವ ಸ್ಥಳಕ್ಕೆ ಬಂದೆವು. ಅಲ್ಲಿಗೆ ಏರು ಮುಗಿಯುವುದು. ಅಲ್ಲಿಂದ ಸಮತಟ್ಟನ ರಸ್ತೆ ಪ್ರಾರಂಭವಾಗುವುದು. ಅಲ್ಲಿಂದ ಸುಮಾರು ಒಂದು ಮೈಲಿ ನಡೆದರೆ ಕೇದಾರನಾಥದ ದೇವಾಲಯ ಸೇರುತ್ತೇವೆ. ಇಲ್ಲಿಂದಲೇ ಕೇದಾರನಾಥದ ದೇವಸ್ಥಾನದ ಗೋಪುರ ಕಾಣುವುದು. ಅದನ್ನು ಕಂಡಾಗಲಂತೂ ನಮಗೆ ಆದ ಆನಂದಕ್ಕೆ ಪಾರವೇ ಇರಲಿಲ್ಲ. ಕೇದಾರನಾಥನಿಗೆ ಜಯವಾಗಲಿ ಎಂದು ಹೇಳಿಕೊಂಡು ಉಳಿದ ಒಂದು ಮೈಲಿಯನ್ನು ಅರ್ಧಗಂಟೆ ಯಲ್ಲಿ ಪೂರೈಸಿದೆವು.

ಇಪ್ಪತ್ತುಮೂರು ಸಾವಿರ ಅಡಿ ಎತ್ತರವಿರುವ ಕೇದಾರನಾಥದ ಹಿಮಾ ವೃತ ಬೆಟ್ಟದ ಅಡಿಯಲ್ಲಿ ಕೇದಾರನಾಥನ ದೇವಸ್ಥಾನವಿದೆ. ಅದು ಸುಮಾರು ಹನ್ನೆರಡು ಸಾವಿರ ಅಡಿಗಳ ಎತ್ತರದಲ್ಲಿದೆ. ದೇವಸ್ಥಾನದ ಎಡಬಲಗಳಲ್ಲಿ ಕೂಡ ಹಿಮಾವೃತ ಶಿಖರಗಳು ಇವೆ. ಅವು ಕೂಡ ಇಪ್ಪತ್ತು ಸಾವಿರ ಅಡಿಗಳ ವರೆಗೆ ಹೋಗುವುವು. ದೇವಸ್ಥಾನದ ಮುಂದುಗಡೆ ಕೇದಾರನಾಥ ಗ್ರಾಮವಿದೆ. ಸುಮಾರು ಮೂವತ್ತು ನಲವತ್ತು ಮನೆಗಳಿವೆ. ಅಂಗಡಿ, ಪೋಸ್ಟ್ ಆಫೀಸು ಇವೆ. ಯಾತ್ರಿಕರು ಇಳಿದುಕೊಳ್ಳಲು ಧರ್ಮಶಾಲೆ ಇದೆ. ಧರ್ಮಶಾಲೆಯವರೇ ನಮಗೆ ಹೊದ್ದುಕೊಳ್ಳುವುದಕ್ಕೆ ಹೆಚ್ಚು ಕಂಬಳಿಯನ್ನು ಕೊಡುವರು. ಸ್ನಾನ ಮಾಡಿಕೊಂಡು ದೇವಸ್ಥಾನಕ್ಕೆ ಹೋಗಿಬರುವ ಎಂದು ದೇವಸ್ಥಾನಕ್ಕೆ ಸ್ವಲ್ಪ

ದೂರದಲ್ಲಿರುವ ಒಂದು ಮನೆಯಲ್ಲಿ ಸುಧಾರಿಸಿಕೊಳ್ಳುತ್ತಿದ್ದೆವು. ಆ ಮನೆಮೇಲೆ ಮತ್ತು ಸುತ್ತಮುತ್ತ ಬಿದ್ದ ಹಿಮ ಕರಗೇ ಇರಲಿಲ್ಲ. ಬಾಗಿಲು ತೆಗೆದು ಹಿತ್ತಲಕಡೆ ಹೋದರೆ ಪೆಡಂಭೂತದಂತೆ ಒಂದು ಬಿಳಿಯ ಹಿಮದ ಮುದ್ದೆಯೇ ಬಿದ್ದಿದೆ. ನಮಗೆ ನಡೆದು ಸಾಕಾಗಿದ್ದುದರಿಂದ ಮೊದಮೊದಲು ಚಳಿ ಕಾಣಲಿಲ್ಲ. ಕ್ರಮೇಣ ನಮಗೆ ದಣಿವು ಆರಿದಂತೆ ಚಳಿಯು ಅರಿವಾಗತೊಡಗಿತು. ನಾವು ತಂದ ಉಣ್ಣೆ ಬಟ್ಟೆಯನ್ನೆಲ್ಲ ಹಾಕಿಕೊಂಡೆವು. ಆದರೂ ನಡುಕ ಬಿಡಲಿಲ್ಲ. ಆ ಸ್ಥಿತಿಯಲ್ಲಿ ಮಂದಾಕಿನಿಯ ಹಿಮದ ನೀರಿನಲ್ಲಿ ಸ್ನಾನಮಾಡಿ ಪುಣ್ಯ ಕಟ್ಟಿಕೊಳ್ಳಬೇಕೆಂಬ ಆಸೆಯೇ ಬರಲಿಲ್ಲ. ಬಾಯಾರಿದಾಗ ನೀರು ಕುಡಿಯಲೆತ್ನಿಸಿದರೆ ಗಂಟಲೆಲ್ಲ ಕೊರೆದುಹೋಗುವುದು. ಕೈ ತೊಳೆದರೆ ಸೇದಿ ಹೋಗುವುದು. ಒಂದು ದೊಡ್ಡ ತಪ್ಪಲೆ ಬಿಸಿನೀರು ಕಾಯಿಸಲು ಪ್ರಯತ್ನಪಟ್ಟೆವು. ಅದನ್ನು ಒಲೆಯ ಮೇಲಿಟ್ಟು ಸುಮಾರು ಎರಡು ಗಂಟೆ ಹೊತ್ತು ಕಾಯಿಸಿದ ಮೇಲೆ ಸ್ವಲ್ಪ ಉಗುರು ಬೆಚ್ಚಗಾಯಿತು. ಅದನ್ನು ತೆಗೆದು ಕೊಂಡು ಬಚ್ಚಲ ಮನೆಗೆ ಸ್ನಾನಕ್ಕೆ ಹೋದರೆ ಕಿಟಕಿಯ ಹತ್ತಿರವೇ ದೊಡ್ಡದೊಂದು ಹಿಮದ ಬಂಡೆಯೇ ಬಿದ್ದಿತ್ತು. ಅದರ ಮೇಲಿಂದ ಗಾಳಿ ಬೀಸಿದಾಗಲಂತೂ ಮೈಮೇಲೆ ಬಿದ್ದ ಉಗುರು ಬೆಚ್ಚಗಿರುವ ನೀರು ತಕ್ಷಣವೇ ಹಿಮದಂತಾಗಿ ಕೊರೆಯುತ್ತಿತ್ತು. ಅಂತೂ ಸ್ನಾನದ ಶಾಸ್ತ್ರ ಮಾಡಿಕೊಂಡು ಕೇದಾರದೇವಾಲಯಕ್ಕೆ ಹೋದೆವು. ದೊಡ್ಡ ದೇವಸ್ಥಾನ ಗರ್ಭಗುಡಿಯ ಮುಂದಿರುವ ಪ್ರಾಂಗಣದಲ್ಲಿ ಪಾಂಡವ ಸಭೆ ಇದೆ. ಇಲ್ಲಿ ಪಂಚ ಪಾಂಡವರು ಕುಂತಿ ಮುಂತಾದವರೆಲ್ಲರ ವಿಗ್ರಹಗಳೂ ಇವೆ. ಸ್ಥಳ ಪುರಾಣದ ಮೂಲಕ ಪಾಂಡವರೆ ಈ ದೇವಾಲಯವನ್ನು ಆದಿಯಲ್ಲಿ ಕಟ್ಟಿದರು ಎನ್ನುವರು. ಪಾಂಡವರು ಕುರುಕ್ಷೇತ್ರದ ಯುದ್ಧದಲ್ಲಿ ಗುರುಹಿರಿಯರನ್ನು ಕೊಲ್ಲಬೇಕಾಯಿತು. ಯಾವಾಗಲೂ ಈ ಕೃತ್ಯ ಧರ್ಮರಾಯನನ್ನು ಪೀಡಿಸುತ್ತಿತ್ತು. ವ್ಯಾಸರು ಧರ್ಮರಾಯನಿಗೆ ಕೇದಾರನಾಥಕ್ಕೆ ಹೋಗಿ ಅಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿ, ನೀವು ಪಾಪದಿಂದ ಪಾರಾಗುವಿರಿ ಎಂದರು. ಅದರಂತೆ ಪಾಂಡವರು ಇಲ್ಲಿಗೆ ಬಂದು ತಪಸ್ಸು ಮಾಡಿದರು. ಇಲ್ಲೆ ಒಂದು ಶಿವಾಲಯವನ್ನು ತಮ್ಮ ಕೈಯಿಂದಲೇ ಕಟ್ಟಿದರು ಎನ್ನುವರು. ಮಹಾಭಾರತದಲ್ಲಿ ಪ್ರಖ್ಯಾತರಾದ ಪಂಚ ಪಾಂಡವರ ವಿಗ್ರಹ ಇಲ್ಲಿದೆ. ವೀರಸುತರನ್ನು ಪೋಷಿಸಿಕೊನೆಯವರೆಗೂ

ಅವರ ಬಳಿಯೇ ಇದ್ದ ಕುಂತಿ ಇಲ್ಲಿರುವಳು. ಆ ಕ್ಷಾತ್ರರಮಣಿ ದ್ರೌಪತಿಯೂ ಇಲ್ಲಿರುವಳು.

ಪಾಂಡವ ಸಭೆಯಿಂದ ಮುಂದೆ ಹೊರಟರೆ ಗರ್ಭಗುಡಿಯಲ್ಲಿ ಬೃಹತ್‌ಲಿಂಗ ಇದೆ. ಇದು ಮಾನವನ ಸುತ್ತಿಗೆಯ ಪೆಟ್ಟಿನಿಂದ ತಯಾರಾದ ಲಿಂಗವಲ್ಲ. ಒರಟೊರಟಾದ ಸುಮಾರು ನಾಲ್ಕು ಅಡಿ ಎತ್ತರದ ಕಲ್ಲುಬಂಡೆ. ಇದರ ಅಗಲ ಸುಮಾರು ಆರು ಅಡಿ ಇರಬಹುದು. ಇದು ಅರ್ಧ ಗೋಳಾಕಾರವಾಗಿದೆ. ಇದರ ಸುತ್ತಲೂ ೧೫–೨೦ ಜನ ನಿಲ್ಲಬಹುದು. ಇದಕ್ಕೆ ಪಾಣಿ ಮೆಟ್ಟಲು ಯಾವುದೂ ಇಲ್ಲ. ಮೇಲು ನೋಟಕ್ಕೆ ಇದು ಬರಿಯ ಕಲ್ಲುಬಂಡೆ. ಯಾವ ಶಿಲ್ಪಿಯೂ ಇದಕ್ಕೆ ಕೆತ್ತನೆಯ ಕೆಲಸ ಮಾಡಿಲ್ಲ. ಆದರೆ ಭಕ್ತರ ಕಣ್ಣಿಗೆ ಚಿನ್ಮಯ. ಇವರೆದುರಿಗೆ ನಿಂತೊಡನೆಯೇ ಪ್ರತಿಯೊಬ್ಬರೂ ತಮ್ಮ ತಮ್ಮ ಭಾಷೆಯಲ್ಲಿ ಶಿವನನ್ನು ಸ್ತುತಿಸುವರು. ತಮ್ಮ ಹೃಸಯದ ಭಾಷೆಯಲ್ಲಿ ಶಿವನೆದುರಿಗೆ ಮಾತನಾಡುವರು, ಕಂಬನಿದುಂಬುವರು, ಅವನನ್ನು ಬಾಚಿ ತಬ್ಬುವರು. ನೀರೆರೆಯುವರು, ಬೆಣ್ಣೆ ಲೇಪಿಸುವರು, ತಮ್ಮ ಇಡಿ ಬಾಳಿನ ಹೊರೆಯನ್ನು ಶಿವನಡಿದಾವರೆಯಲ್ಲಿಡುವರು. ತಾವು ಗಂಡಸರು ಅಥವಾ ಹೆಂಗಸರು, ತಾವು ಪಂಡಿತರು ಪಾಮರರು, ಬ್ರಾಹ್ಮಣರು ಬ್ರಾಹ್ಮಣೇತರರು ಎಂಬ ತಾರತಮ್ಯವೇ ಇಲ್ಲ. ಇತರರು ತಮ್ಮನ್ನು ನೋಡುತ್ತಿರುವರು ಎಂಬ ಪರಿವೆಯೇ ಇಲ್ಲ. ಯಾತ್ರಿಕನ ಕಣ್ಣಿನಿಂದ ಭಕ್ತಿಗಂಗೆ ಚಿಮ್ಮಿ ಹರಿಯುವುದು. ಶಿವ ಜೀವಿಗಳ ಸಂಕಟವನ್ನು ತಾನು ಸ್ವೀಕರಿಸಿ ಶಾಂತಿ ಇತ್ತು ಕಳುಹಿಸುತ್ತಿರುವನು, ಇಲ್ಲಿ ಎಷ್ಟು ಶತಮಾನಗಳಿಂದ ಈ ಸ್ಥಳಕ್ಕೆ ಯಾತ್ರಿಕರು ಬರುತ್ತಿರುವರು! ಎಷ್ಟು ಜೀವಿಗಳು ತಮ್ಮ ಹೃದಯದ ದುಃಖವನ್ನು ಇಲ್ಲಿ, ಶಿವನಡಿದಾವರೆಯಲ್ಲಿ, ಕಳೆದು ಕೊಳ್ಳುತ್ತಿರುವರು! ನಾವೆಲ್ಲಾ ಎಳೆ ಹಸುಳೆಗಳಾಗುವೆವು ಪಿನಾಕಪಾಣಿಯ ಮುಂದೆ. ಇದೊಂದು ನಾವು ಜೀವನದಲ್ಲಿ ಎಂದೆಂದಿಗೂ ಮರೆಯದ ದೃಶ್ಯ. ನಾವು ಇಷ್ಟುದೂರ ಬಂದುದು ಸಾರ್ಥಕವಾಯಿತು, ಇಷ್ಟುದೂರ ನಡೆದುದು ಸಾರ್ಥಕವಾಯಿತು ಎಂದು ಶಿವನಿಗೆ ಮಣಿದು ತಂಗಿದ್ದ ಸ್ಥಳಕ್ಕೆ ಬಂದೆವು.

ಬಂದೊಡನೆಯೆ ನಾವು ಕುಳಿತಿದ್ದ ಕೋಣೆಯಲ್ಲಿ ಬೆಂಕಿಯನ್ನು ಹಾಕಿ

ಕಾಯಿಸಿಕೊಳ್ಳುತ್ತಿದ್ದೆವು. ನಮ್ಮ ಅಡಿಗೆಯವನು ಕೆಳಗೆ ಅಡಿಗೆ ಮಾಡುತ್ತಿದ್ದ. ಆಗ ಬಾಗಿಲಲ್ಲಿ ಸದ್ದಾಗಲು ತೆಗೆದಾಗ ಒಬ್ಬ ಹೆಂಗಸು ತನ್ನ ಕೈಯನ್ನು ಒದರುತ್ತಾ ನಾನು ಸ್ವಲ್ಪ ಬೆಂಕಿ ಕಾಯಿಸಿಕೊಳ್ಳಬೇಕು, ತಣ್ಣೀರು ಮುಟ್ಟಿಬಿಟ್ಟೆ ಎಂದು ಅರಚಿಕೊಂಡಳು. ಆಕೆ ಬೆಂಕಿಯ ಹತ್ತಿರ ಕುಳಿತು ಕೈಗೆ ಬೆಂಕಿ ಶಾಖವನ್ನು ಚೆನ್ನಾಗಿ ತೋರಿಸಿದ ಮೇಲೆ ರಕ್ತಚಲನೆ ಪ್ರಾರಂಭವಾಯಿತು ಆ ಭಾಗದಲ್ಲಿ. ಇಂತಹ ನೀರಿನಲ್ಲೆ ಕೆಲವರು ಕೆಳಗೆ ಸ್ನಾನ ಮಾಡುತ್ತಿದ್ದುದನ್ನು ಕಂಡೆ. ಅವರು ಯಾವ ಬೆಂಕಿಯನ್ನೂ ಕಾಯಿಸಿಕೊಳ್ಳುವುದಿಲ್ಲ. ಸ್ನಾನ ಮಾಡಿ ದೇವಸ್ಥಾನಕ್ಕೆ ಸೀದ ಹೋಗುವರು. ಅಭ್ಯಾಸಬಲದಿಂದ ನಮ್ಮ ದೇಹ ವನ್ನು ಯಾವ ವಾತಾವರಣಕ್ಕೆ ಬೇಕಾದರೂ ಹೊಂದಿಸಿಕೊಳ್ಳಬಹುದೆಂಬುದನ್ನು ಇದು ತೋರುವುದು.

ನಾವು ಒಳಗೆ ಬೆಂಕಿ ಕಾಯಿಸಿಕೊಳ್ಳುತ್ತಿದ್ದಾಗ ಹೊರಗೆ ಹಿಮ ಬೀಳುತ್ತಿತ್ತು. ಸಣ್ಣ ಹತ್ತಿಯ ಚೂರಿನಂತೆ ಮೆಲ್ಲಗೆ ಮನೆ ಮತ್ತು ರಸ್ತೆಯ ಮೇಲೆಲ್ಲ ಬಿದ್ದಿತು. ಅಲ್ಲಿ ಮಳೆ ಬೀಳುವುದಿಲ್ಲ. ಮಳೆ ಹನಿಯೆಲ್ಲ ಆ ಶೈತ್ಯಕ್ಕೆ ಹಿಮವಾಗಿ ಬೀಳುವುದು. ಸ್ವಲ್ಪವೂ ಶಬ್ದಮಾಡುವುದಿಲ್ಲ. ಅಷ್ಟು ಮೃದುವಾಗಿ ಬೀಳುವುದು. ಎಲ್ಲಿ ನೋಡಿದರೂ ಬಿಳಿಯ ಹಿಮ. ಸೂರ್ಯನ ಬೆಳಕು ಅದರ ಮೇಲೆ ಬಿದ್ದಾಗ ವಜ್ರದಲ್ಲಿ ಪ್ರತಿಬಿಂಬಿಸುತ್ತಿರುವುದು, ಬೆಳ್ಳಿಯನ್ನು ಕಾಯಿಸಿ ಮನೆಯ ಮೇಲೆ ಮತ್ತು ರಸ್ತೆಗೆಲ್ಲ ಸುರಿದಂತೆ ಇರುವುದು. ಒಳಗಿನಿಂದ ಕುಳಿತು ಕೊಂಡು ಹೊರಗಿನ ಸೌಂದರ್ಯವನ್ನು ನೋಡುತ್ತಿದ್ದೆವು. ನಾವು ಬರುವಾಗಲೇನಾ ದರೂ ದಾರಿಯಲ್ಲಿ ಹೀಗೆ ಬಿದ್ದಿದ್ದರೆ ಈ ಸೌಂದರ್ಯದ ಕಡೆಗೆ ಮನಸ್ಸು ಹೋಗು ವುದಕ್ಕೆ ಅವಕಾಶವೇ ಇರುತ್ತಿರಲಿಲ್ಲ. ಚಳಿಯಕಡೆಗೇ ನಮ್ಮ ಗಮನವೆಲ್ಲ ಹೋಗುತ್ತಿತ್ತು. ಕೆಳಗೆ ಅಡಿಗೆಯವನು ಬೇಳೆ ಬೇಯಿಸಿ ಬೇಯಿಸಿ ಸಾಕಾಯಿತು. ಬೇಳೆ ಬೇಯಲೇ ಒಲ್ಲದು. ಆ ಎತ್ತರದಲ್ಲಿ ಬೇಳೆ ಬೇಯುವುದಿಲ್ಲವಂತೆ. ಅಕ್ಕಿ ಕೂಡ ಚೆನ್ನಾಗಿ ಅನ್ನವಾಗಲಿಲ್ಲ. ಅದನ್ನೇ ಹೇಗೋ ತಿಂದು ವಿಶ್ರಾಂತಿ ಪಡೆದೆವು.

ಸಂಜೆಯಾಯಿತು. ಸೂರ್ಯ ರಂಗಿನ ಓಕುಳಿಯನ್ನು ಪಡವಲಂಚಿನಲ್ಲಿ ಚೆಲ್ಲಿ ಅಸ್ತಗಿರಿಮಸ್ತಕವನೇರಿದನು. ರಜತಾದ್ರಿಯ ಶೃಂಗಗಳಂತೂ ಕೆಲಕಾಲ

ಚಿನ್ನದ ಮುಲಾಮಿನಿಂದ ಅಲಂಕೃತವಾದಂತೆ ಇತ್ತು. ನಾಳೆ ಹುಣ್ಣಿಮೆ. ಹುಣ್ಣಿಮೆಯ ಹಿಂದಿನ ಚಂದ್ರ ದಿಗಂತಕ್ಕೆ ಸ್ವಲ್ಪ ಮೇಲೇರಿದ್ದನು. ನಾನು ಇಂತಹ ಸನ್ನಿವೇಶದಲ್ಲಿ ಶಿವ ಸಹಸ್ರನಾಮವನ್ನು ಓದುತ್ತಾ ರೂಮಿನಲ್ಲಿ ಕುಳಿತೆ. ಸ್ವಲ್ಪಹೊತ್ತಾದಮೇಲೆ ಸಂಜೆಯ ಮಂಗಳಾರತಿ ದೇವಸ್ಥಾನದಲ್ಲಿ ಪ್ರಾರಂಭ ವಾಯಿತು. ಆ ಬೃಹತ್ ಶಿವಲಿಂಗವನ್ನು ಅಲಂಕಾರಮಾಡಿ ಅದೊಂದು ವ್ಯಕ್ತಿಯಹಾಗೆ ಕಾಣುವಂತೆ ಮಾಡುವರು. ಶಂಖ ಜಾಗಟೆಗಳೊಡನೆ ಮಂಗಳಾರತಿ ಮಾಡುವರು. ಅಂದು ಕೇದಾರನಾಥದಲ್ಲಿ ತಂಗಿದ್ದ ಭಕ್ತರೆಲ್ಲ ದೇವಸ್ಥಾನದ ಪ್ರಾಂಗಣದಲ್ಲಿ ನೆರೆಯುವರು.

ಸಹಸ್ರನಾಮವನ್ನು ಪೂರೈಸಿ ನಾನು ಕೋಣೆಯ ಹೊರಗೆ ಬಂದೆ. ದೇವಸ್ಥಾನದ ಹಿನ್ನೆಲೆಯಲ್ಲಿದ್ದ ರಜತಾದ್ರಿಯಮೇಲೆ ಚಂದ್ರನ ಕಾಂತಿ ಹಾಲು ಚೆಲ್ಲಿದಂತೆ ಬಿದ್ದಿತ್ತು. ಬೆಟ್ಟದಮೇಲೆ ಬಿದ್ದಿದೆ ಘನೀಭೂತವಾದ ಹಿಮ. ಅದರ ಶಿಖರಗಳು ಮುಗಿಲನ್ನು ಭೇದಿಸಿಕೊಂಡು ಹೋಗುವುವು. ಅದರ ಮೇಲೆ ಉಡು ರಾಜನ ಕಾಂತಿ ಬಿದ್ದಾಗ ಸಮಾಧಿಮಗ್ನ ಶಿವನ ಮೊಗದಮೇಲೆ ಸುಳಿವ ಶಾಂತಿ ಮಂದಹಾಸಗಳಂತೆ ಕಂಗೊಳಿಸಿತು. ಅವನ ಆನಂದದ ಒಂದು ವೀಚಿ ನಮ್ಮ ಸೃಷ್ಟಿ; ಜೀವರುಗಳೆಲ್ಲ ಅವನ ಆನಂದಾಬ್ಧಿಯ ಮೇಲಿರುವ ನೊರೆಯಂತೆ ಕಂಡವು. ಎಲ್ಲ ಶಿವಮಯವಾಯಿತು. ದೇವಸ್ಥಾನದ ಒಳಗೆ ಹೊರಗೆ, ಪ್ರತಿಜೀವಿ ಗಳ ಅಂತರಾಳದಲ್ಲಿ, ಅವನು ಓತಪ್ರೋತನಾದಂತೆ ಕಾಣಿಸಿತು. ಎಡಗಡೆ ಸ್ವಲ್ಪ ದೂರದಲ್ಲಿ ಮಂದಾಕಿನಿ ಹರಹರ ನಿನಾದವನ್ನು ಮಾಡಿಕೊಂಡು ಹರಿಯುತ್ತಿದೆ. ಎದುರಿಗೆ ದೇವಸ್ಥಾನದಲ್ಲಿ ನೆರೆದ ನೂರಾರು ಭಕ್ತರು ಹರಹರ ಮಹದೇವ ಎಂದು ಏಕಕಂಠದಲ್ಲಿ ಸುತಿಸುತ್ತಿರುವರು. ಇಡೀ ವಾತಾವರಣ ಶಿವನಾದದಿಂದ ಅನುರಣಿತವಾಗುತ್ತಿತ್ತು. ಶ್ರೀ ರಾಮಕೃಷ್ಣರಿಗೆ ಶಿವನಮೇಲೆ ಅತಿ ಪ್ರಿಯ ವಾಗಿದ್ದ ಸ್ತೋತ್ರವೊಂದು ಜ್ಞಾಪಕಕ್ಕೆ ಬಂತು. ಅದನ್ನು ಮನದಲ್ಲೇ ಉಲಿಯ ತೊಡಗಿದೆ.

ಜಯಶಿವ ಶಂಕರ ಹರ ತ್ರಿಪುರಾರಿ
ಪಾಶಿ ಪಶುಪತಿ ಪಿನಾಕಧಾರಿ

ಶಿರೆ ಜಟಾಜೂಟ ಕಂಠೆ ಕಾಲಕೂಟ
ಸಾಧಕ ಜನಗಣ ಮಾನಸ ವಿಹಾರಿ

ತ್ರಿಲೋಕಪಾಲಕ ತ್ರಿಲೋಕನಾಶಕ
ಪರಾತ್ಪರಪ್ರಭು ಮೋಕ್ಷವಿಧಾಯಕ
ಕರುಣಾನಯನೆ, ಹೇರುಭಕತಜನೆ
ಲಯೋಭಿ ಶರಣ ಚರಣೆ ತೊಮಾರಿ

೧೧

# ಮರಳಿ ತಾಯೆಡೆಗೆ

ಕೇದಾರನಾಥದ ಭವ್ಯ ದೃಶ್ಯಗಳನ್ನು ನೋಡಿ ಅಲ್ಲಿಯೇ ಮಾರನೇ ದಿನವೂ ಇರಬೇಕೆಂದು ನಮ್ಮಲ್ಲಿ ಕೆಲವರು ಅಭಿಪ್ರಾಯಪಟ್ಟರು. ರಾತ್ರಿಮಲಗಿದ್ದಾಗ ನಿದ್ರೆ ಬರಲಿಲ್ಲ. ವಿಪರೀತ ಚಳಿ. ಹೊದ್ದುಕೊಳ್ಳುವುದಕ್ಕೆ ಧರ್ಮಶಾಲೆಯವನು ಕಂಬಳಿ ಕೊಟ್ಟ. ಅವೆಲ್ಲ ತಣ್ಣಗೆ ಕೊರೆಯುತ್ತಿದ್ದುವು. ಅದನ್ನು ಹೊದ್ದುಕೊಂಡರೆ ಮೊದಲು ನಮ್ಮ ದೇಹದ ಶಾಖವನ್ನು ಅದಕ್ಕೆ ಕೊಟ್ಟು ಅವನ್ನು ಬೆಚ್ಚಗೆ ಮಾಡಿದಮೇಲೆ ಮಾತ್ರ ನಮಗೆ ಅದರಿಂದ ಪ್ರಯೋಜನ. ಒಂದು ಪಕ್ಕದಿಂದ ಮತ್ತೊಂದು ಪಕ್ಕಕ್ಕೆ ಸರಿಯಿತು ಎಂದರೆ ಎಲ್ಲಿಯಾದರೂ ಸ್ವಲ್ಪ ಜಾಗ ಬಿಟ್ಟದ್ದರೂ ಅದರಿಂದ ಗಾಳಿ ತೂರಿ ಸಹಿಸಲಸಾಧ್ಯವಾಗುತ್ತಿತ್ತು. ಈ ವರುಷ ಹಿಂದಿನ ವರುಷಗಳಿಗಿಂತ ಹೆಚ್ಚು ಚಳಿಯಂತೆ. ಮನೆಯಮೇಲೆ, ಪಕ್ಕದಲ್ಲಿ ಬಿದ್ದಿದ್ದ ಮಂಜು ಹಾಗೇ ಇದ್ದವು. ಗುಡಿಯ ಸುತ್ತ ಪ್ರದಕ್ಷಿಣೆ ಹೋಗುತ್ತಿದ್ದರೆ ಕರಗದೆ ಹಾಗೆಯೇ ಬಿದ್ಧಿರುವ ಮಂಜುಗಡ್ಡೆಯನ್ನು ನೋಡಬಹುದು. ರಾತ್ರೆ ಹೊತ್ತು ಹೊರಗೆ ಹೋಗಿ ಬರುವುದರೊಳಗೆ ಹೊದಿಕೆಯು ಪುನಃ ಕೊರೆಯುವುದು. ಮಲಗಿಕೊಂಡರೆ ನಿದ್ರೆಯಂತೂ ಬರುವಂತೆಯೇ ಇರಲಿಲ್ಲ. ಅಂತೂ ಹೇಗೋ ರಾತ್ರಿ ಕಳೆದೆವು. ಬೆಳಿಗ್ಗೆ ಎದ್ದೊಡನೆಯೆ ಕೂಲಿಗಳು ಬಂದರು. ನೀವು ಇಲ್ಲಿ ಮತ್ತೊಂದುದಿನ ಇದ್ದರೆ ನಾವು ಸತ್ತುಹೋಗುತ್ತೇವೆ ಎಂದರು. ಅವರಿಗೆ ಮೈಮೇಲೆ ತೊಟ್ಟ ಹರಕಲು ಅಂಗಿ ಮತ್ತು ಮೊಳಕಾಲಮೇಲಿರುವ ಚಡ್ಡಿ ಮಾತ್ರ. ಅದರಮೇಲೆ ಅಂಗಡಿಯವನೊಬ್ಬನು ಕೃಪೆ

ಮಾಡಿ ಕೊಟ್ಟ ಹರಕಲು ಕಂಬಳಿ ಒಂದು ಇತ್ತು. ಅವರು ರಾತ್ರಿಯೆಲ್ಲ ಚಳಿ ಯಿಂದ ನಡುಗಿ ನಿದ್ದೆ ಇಲ್ಲದೆ ಎದ್ದು ಬಂದರು.

ನಿನ್ನೆದಿನ ಮತ್ತೊಂದುದಿನ ಇರೋಣ ಎಂದು ಸತ್ಯಸಂಕಲ್ಪ ಮಾಡಿದ್ದ ವರನ್ನು "ಏನಾಯಿತು ನಿಮ್ಮ ನಿರ್ಧಾರ ?" ಎಂದು ಕೇಳಿದೆ. ಅವರು "ನಮ ಗೇನೋ ಇರುವುದಕ್ಕೆ ಇಚ್ಛೆ. ಆದರೆ ಕೂಲಿಗಳು ಹೋಗಬೇಕು ಎಂದಿರುವರು. ಆದಕಾರಣ ಹಿಂತಿರುಗದೆ ವಿಧಿಯಿಲ್ಲ" ಎಂದರು. ಅಂತೂ ಅವರ ಸತ್ಯಸಂಕಲ್ಪಕ್ಕೆ ಕೂಲಿಗಳು ಭಂಗ ತಂದರೊ, ಅಥವಾ ಅವರ ಸಹಾಯಕ್ಕೇ ಬಂದರೋ ತಿಳಿಯದು !

ಬೆಳಿಗ್ಗೆ ಎಂದಿನಂತೆ ಸ್ವಲ್ಪ ಬಿಸಿನೀರು ಕಾಯಿಸಿ ಸ್ನಾನಮಾಡಿಕೊಂಡು ಗುಡಿಗೆ ಹೊರೆಟೆವು. ನಮ್ಮೊಡನೆ ಬರಬೇಡ ಎಂದು ಗುಪ್ತಕಾಶಿಯಲ್ಲಿ ಸಿಕ್ಕಿದ ಪಂಡನಿಗೆ ಹೇಳಿದ್ದರೂ ಆತ ಆಗಲೆ ಅಲ್ಲಿ ಹಾಜರಾಗಿದ್ದ. ನಮ್ಮಿಂದ ಮತ್ತು ಇನ್ನೂ ಕೆಲವು ಯಾತ್ರಿಕರಿಂದ ಏನೊ ಸ್ವಲ್ಪ ದುಡ್ಡು ಸಿಗಬಹುದೆಂಬ ಆಸೆ. ದೇವಸ್ಥಾನದಲ್ಲಿ ಏನು ಏನು ಪೂಜೆ ಮಾಡಿಸುತ್ತೀರಿ ಎಂದು ಕೇಳಿದ. ಸುಮ್ಮನೆ ದೇವಸ್ಥಾನದಲ್ಲಿ ನಾನು ಕುಳಿತು ಬರುತ್ತೇನೆ, ನನಗೆ ಯಾವ ಪೂಜೆಯ ಆವಶ್ಯ ಕವೂ ಇಲ್ಲ ಎಂದೆ. ನಮ್ಮೊಡನೆ ಬಂದಿರುವವರ ಬಳಿಗೆ ಹೋಗಿ ಅವರನ್ನು ಪೀಡಿಸಿದ. ಅವರು ಅಷ್ಟುಹೊತ್ತಿಗೆ ಆಗಲೇ ದೇವಸ್ಥಾನದ ಅಧಿಕಾರಿಗಳಿಂದ ಅರ್ಧಗಂಟೆ ದೇವರ ಸನ್ನಿಧಿಯಲ್ಲಿ ಇದ್ದು ಶಿವಸಹಸ್ರ ನಾಮವನ್ನು ಮಾಡಿಸ ಬೇಕೆಂದು ದುಡ್ಡು ಕೊಟ್ಟು ಚೀಟಿ ತೆಗೆದುಕೊಂಡಿದ್ದರು. ಪಂಡನ ಆವಶ್ಯಕತೆ ಬೇಕಿಲ್ಲ ಎಂದರು. ಆದರೆ ಆತ ಬಿಡಲಿಲ್ಲ. ಇವರು ದೇವಸ್ಥಾನಕ್ಕೆ ಹೋಗು ವುದನ್ನು ತಡೆದ. ಅನಂತರ ಅದು ಸಾಧ್ಯವಿಲ್ಲದಾಗ ಅಲ್ಲಿಯ ಪೂಜಾರಿಗಳು ಸಹಸ್ರ ನಾಮವನ್ನು ಮಾಡಿಸಲು ಪಂಡ ಅವಕಾಶ ಕೊಡಲಿಲ್ಲ. ಅದು ತನ್ನ Previlege ಎಂದ. ಆಗಲಿ ನೀನೇ ಮಾಡಿಸು ಎಂದರೆ ಆ ಮನುಷ್ಯನಿಗೆ ಶಿವಸಹಸ್ರನಾಮವೆ ಗೊತ್ತಿಲ್ಲ. ಸುಮ್ಮನೆ ಶಿವಾಯನಮಃ ಎಂದು ಹಲವುವೇಳೆ ಹೇಳಿ ಪೂಜೆ ಮಾಡಿಸಿ ದಕ್ಷಿಣೆಗೆ ಕೈಯೊಡ್ಡಿದ. ಈ ಪಂಡನ ಪೂಜೆಯಿಂದ ಶಿವನಿಗೆ ಎಷ್ಟು ಪ್ರೀತಿಯಾಯಿತೊ, ಮಾಡಿಸಿದ ಭಕ್ತರಿಗೆ ಎಷ್ಟು ತೃಪ್ತಿ ಯಾಯಿತೊ ದೇವರೇ ಬಲ್ಲ.

ನಾನು ದೇವಸ್ಥಾನದ ಹೊರಗೆ ಕುಳಿತು ಸುತ್ತಲೂ ನೋಡುತ್ತಿದ್ದೆ. ಬಿಸಿಲಿನಲ್ಲಿ ಇಡೀ ಕೇದಾರನಾಥ ಗ್ರಾಮ ಮುಳುಗಿತ್ತು. ಅಲ್ಲಿ ಹೊರಗೆ ಬಿಸಿಲಿಗೆ ಮೈಯೊಡ್ಡಿ ಕುಳಿತರೆ ಆನಂದವಾಗುವುದು. ನನಗೆ ಸ್ವಲ್ಪ ಹಿಂದೆ ಕುಳಿತು ತೀರ್ಥಪ್ರಸಾದವನ್ನು ಹಂಚುತ್ತಿದ್ದ ಪೂಜಾರಿ ನಮ್ಮ ನಮ್ಮಲ್ಲಿ ಕನ್ನಡ ಮಾತನಾಡಿಕೊಳ್ಳುವುದನ್ನು ಕೇಳಿ ಆತನೂ ಕನ್ನಡದಲ್ಲಿ ಮಾತನಾಡಿಸಿದನು. ನನಗೆ ಆಶ್ಚರ್ಯ, ಹಿಮಾಲಯದ ಈ ಮೂಲೆಯಲ್ಲಿ ಕನ್ನಡ ಮಾತನಾಡುವವನು ಹೇಗೆ ಬಂದ ಎಂದು. ಅವನನ್ನು ವಿಚಾರಿಸಿದಾಗ ಕೇದಾರನಾಥ ಊಖೀಮಠದ ಆಡಳಿತಕ್ಕೆ ಸೇರಿದುದೆಂದೂ, ಅಲ್ಲಿರುವವರು ಪಂಚಾಚಾರ್ಯ ಸಂಪ್ರದಾಯಕ್ಕೆ ಸೇರಿದ ಲಿಂಗಾಯಿತ ಮತದವರೆಂದೂ ಹೇಳಿದನು. ಯಾವಾಗಿನಿಂದ ಲಿಂಗವಂತ ಮತದವರು ಇಲ್ಲಿ ಬಂದು ನೆಲಸಿರುವರು ಎಂದು ಕೇಳಿದೆ. "ಅದು ನನಗೆ ಗೊತ್ತಿಲ್ಲ, ಹಿಂದಿನಿಂದಲೂ ಇಲ್ಲಿ ಕನ್ನಡ ಮಾತನಾಡುವವರೇ ಇರುವರು" ಎಂದು ಆತ ಹೇಳಿದ. ಕನ್ನಡನಾಡಿನವರಿಗೊಂದು ಹೆಮ್ಮೆಯ ವಿಷಯ ಇದು. ಕನ್ನಡಿಗರು ತಮ್ಮ ಪ್ರಭಾವನ್ನು ಇಷ್ಟು ದೂರದಲ್ಲಿ ಬೀರಿರುವರಲ್ಲ ಎಂದು ಆಶ್ಚರ್ಯವಾಯಿತು.

ಕೇದಾರನಾಥ ದೇವಾಲಯಕ್ಕೆ ಹಿಂದೆ ಎರಡು ಪರ್ಲಾಂಗು ದೂರದಲ್ಲಿ ಹಿಮಾವೃತ ಪರ್ವತಗಳ ಪಕ್ಕದಲ್ಲೆ ಶ್ರೀ ಶಂಕರಾಚಾರ್ಯರು ನಿರ್ವಾಣ ಪಡೆದರು ಎಂದು, ಅವರ ಒಂದು ಸಮಾಧಿ ಮಂದಿರವನ್ನು ತೋರುವರು. ಶ್ರೀ ಶಂಕರಾಚಾರ್ಯರ ಹೆಸರನ್ನು ಇಲ್ಲಿ ಕೇಳಿದರೇ ರೋಮಾಂಚನವಾಗುವುದು. ಅವರು ಹುಟ್ಟಿದ್ದು ಮಲಬಾರಿನ ಮೂಲೆಯ ಕಾಲಡಿಯಲ್ಲಿ. ಮೂವತ್ತೆರಡು ವರುಷಗಳಲ್ಲಿ ಪ್ರಸ್ಥಾನತ್ರಯಗಳಿಗೆ ಭಾಷ್ಯ ಬರೆದು, ಅದ್ವೈತವನ್ನು ಪ್ರತಿಪಾದಿಸಿ, ಅನೇಕರೊಡನೆ ವಾದಮಾಡಿ, ಇಡೀ ಭರತಖಂಡವನ್ನು ಸಂಚರಿಸಿ, ಹಲವುಕಡೆ ಮಠಗಳನ್ನು ಸ್ಥಾಪಿಸಿ, ಬದರಿಕಾಶ್ರಮದಲ್ಲಿ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿ ಅಲ್ಲಿ ಒಂದು ಮಠವನ್ನು ಸ್ಥಾಪಿಸಿ, ಕೇದಾರನಾಥಕ್ಕೆ ಬಂದು ಇಲ್ಲಿ ನಿರ್ವಾಣ ಪಡೆದರು ಎನ್ನುವರು. ಶ್ರೀ ಶಂಕರಾಚಾರ್ಯರ ಪ್ರಚಂಡ ಪ್ರತಿಭೆಗೂ ಇಲ್ಲಿರುವ ಹಿಮಾಲಯದ ಶಿಖರಗಳಿಗೂ ಒಂದು ಸಾಮ್ಯವಿದೆ. ಪಾಂಡಿತ್ಯದ ಪರಾಕಾಷ್ಠತೆಯನ್ನು ಶಂಕರಾಚಾರ್ಯರು ಮುಟ್ಟಿದರು. ಇಲ್ಲಿರುವ ತುಷಾರ

ಶಿಖರಗಳು ಪ್ರಪಂಚದಲ್ಲೆಲ್ಲಾ ಎತ್ತರವಾದುವೆಂದು ಪ್ರಖ್ಯಾತವಾಗಿವೆ. ಅವರು ಹಿಮಗಿರಿಯ ಮಡಿಲಲ್ಲಿ, ಶಿವನ ಸನ್ನಿಧಿಯಲ್ಲಿ, ತಮ್ಮ ಪಾರ್ಥಿವ ಕಳೇಬರವನ್ನು ತೊರೆದರಂತೆ. ಮೊದಲೇ ಪವಿತ್ರ, ಶಂಕರಾಚಾರ್ಯರ ಪುಣ್ಯ ಸ್ಮೃತಿಯಿಂದ ಪವಿತ್ರತರವಾಯಿತು. ಆದಕಾರಣವೇ ನಾರದರು ಭಕ್ತಿಸೂತ್ರದಲ್ಲಿ "ತೀರ್ಥೀ ಕುರ್ವಂತಿ ತೀರ್ಥಾನಿ" ಎನ್ನುವರು.

ಅವರ ಸಮಾಧಿಯನ್ನು ನೋಡಿಕೊಂಡು ದೇವಸ್ಥಾನದ ಕೆಳಗೆ ಬಂದರೆ ಅಲ್ಲೊಂದು ಸತ್ಯನಾರಾಯಣನ ಹಳೆಯ ದೇವಸ್ಥಾನವಿದೆ. ಅದೆಲ್ಲ ಪಾಳುಬಿದ್ದಿದೆ. ಅದನ್ನು ಯಾರೂ ಕೇಳುವವರೇ ಇಲ್ಲ. ಅದಕ್ಕೆ ಪಕ್ಕದಲ್ಲೆ ದೇವಿಗೆ ಒಂದು ದೇವಸ್ಥಾನವಿದೆ. ಅದಾದಮೇಲೆ ಉದಕಕುಂಡ ಎಂಬ ಒಂದು ಚಿಲುಮೆ ಇದೆ. ಅದರಿಂದ ಜಲಪಾನ ಮಾಡಿದವರಿಗೆ ಪುನರ್ಜನ್ಮವಿಲ್ಲವೆಂದು ದೊಡ್ಡ ಅಕ್ಷರಗಳಲ್ಲಿ ಬರೆದಿರುವರು. ಆ ಜಲಪಾನಕ್ಕೆ ಅರ್ಧಾಣೆ ಮಾತ್ರ ಖರ್ಚು. ಜನನ ಮರಣಗಳ ಕೋಟಲೆಯಿಂದ ಪಾರಾಗುವುದು ಬಹಳ ಸುಲಭ ಇಲ್ಲಿ!

ಕೇದಾರನಾಥದ ಸ್ಥಳಪುರಾಣದಲ್ಲಿ ಪಾರ್ವತಿ ಶಿವನನ್ನು ಪ್ರಶ್ನೆಮಾಡುತ್ತಾಳೆ, ಕೇದಾರದ ಮಹಿಮೆಯನ್ನು ವರ್ಣಿಸು, ಎಂದು. ಶಿವ ಹಲವು ಕಥೆಗಳನ್ನು ಹೇಳಿ ಕೊನೆಗೆ "ಪಾರ್ವತಿ, ಹಗಲು ರಾತ್ರಿ ಐನೂರು ವರ್ಷ ಹೇಳುತ್ತಾ ಹೋದರೂ ಕೇದಾರದ ಮಹಿಮೆಯನ್ನು ವರ್ಣಿಸುವುದಕ್ಕೆ ಆಗುವುದಿಲ್ಲ" ಎನ್ನುವನು. ಶಿವನಿಗೇನು ಅನಂತಕಾಲವಿದೆ ಮುಂದೆ; ಕಾಲಹರಣಕ್ಕೆ ಮತ್ತು ಪಾರ್ವತಿಯ ಮನೋರಂಜನೆಗೆ ಬೇಕಲ್ಲ ಕಥೆಗಳು. ಅವನ್ನು ಬೇಕಾದಷ್ಟು ವರುಷ ಲಂಬಿಸುತ್ತಾ ಹೋಗಬಹುದು.

ನಮ್ಮ ಬಿಡಾರಕ್ಕೆ ಹಿಂತಿರುಗಿ ಬಂದು ಸುಮಾರು ಎರಡೂವರೆಗಂಟೆಗೆ ಕೊನೆಯಸಲ ಕೇದಾರನಾಥನಿಗೆ ನಮಿಸಿ ಹಿಂತಿರುಗಿದೆವು. ಗಂಟೆ ಮಧ್ಯಾಹ್ನ ಎರಡೂವರೆ ಆಗಿದ್ದರೂ ಬಿಸಿಲು ಹಿತಕರವಾಗಿರುವುದು. ನಡೆಯುವುದಕ್ಕೆ ಕಷ್ಟವಿಲ್ಲ. ಇಳಿಜಾರು ನಮ್ಮನ್ನು ನೂಕುತ್ತಿರುವುದು. ಆ ವೇಗವನ್ನು ತಡೆಯುವುದೇ ಕಷ್ಟ. ಸುಮಾರು ನಾಲ್ಕು ಗಂಟೆ ಹೊತ್ತಿಗೆ ರಂಬಾರ ಎಂಬಲ್ಲಿಗೆ ಬಂದೆವು. ಅಲ್ಲಿ ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ಗೌರೀಕುಂಡದ ಕಡೆ ಹೊರಟೆವು.

ಇಲ್ಲಿಂದ ಗೌರೀಕುಂಡಕ್ಕೆ ಹೋಗುವಾಗ ಅನೇಕಜನ ಅಂದು ಸಂಜೆ ರಂಬಾರದಲ್ಲಿ ತಂಗಿ, ಮಾರನೆದಿನ ಕೇದಾರನಾಥಕ್ಕಾಗಿ ಹೋಗುವುದಕ್ಕೆ ನಿಟ್ಟುಸಿರು ಬಿಡುತ್ತ ಹತ್ತಿಕೊಂಡು ಬರುತ್ತಿದ್ದರು. ನಾವು ನಿರಾಯಾಸವಾಗಿ ಬರುತ್ತಿದ್ದೆವು. ಅವರಾದರೊ ಪ್ರತಿಯೊಂದು ಹೆಜ್ಜೆಯನ್ನು ಇಡುವಾಗಲೂ ಮೇಲುಸಿರು. ‘ ಜೈ ಶಿವ ಕೇದಾರ್ ’ ಎಂದು ಹೆಜ್ಜೆ ಹೆಜ್ಜೆಗೆ ಉಚ್ಚರಿಸುತ್ತ ಏರುತ್ತಿದ್ದರು. ಒಬ್ಬಾಕೆಗೆ ಕಾಲು ಗಾಯವಾಗಿತ್ತು. ನಡೆಯಲು ಆಗುತ್ತಿರಲಿಲ್ಲ. ಕುಂಟುತ್ತಾ ಹೋಗು ತ್ತಿದ್ದಳು. ಆದರೂ ಎಂತಹ ದೃಢಶ್ರದ್ಧೆ ಭಕ್ತಿ ಮತ್ತು ವಿಶ್ವಾಸವನ್ನು ಅವಳಲ್ಲಿ ನೋಡಬಹುದು !

ಸುಮಾರು ಆರೂವರೆ ಗಂಟೆ ಹೊತ್ತಿಗೆ ಗೌರೀಕುಂಡಕ್ಕೆ ಬಂದೆವು. ಅಲ್ಲಿ ಒಂದು ಕಡೆ ಸಾಮಾನು ಇಟ್ಟು ಬಿಸಿನೀರಿನ ಕೊಳಕ್ಕೆ ಹೋಗಿ ಮನದಣಿಯ ಸ್ನಾನಮಾಡಿ ದೇಹಾಲಸ್ಯದಿಂದ ಪಾರಾದೆವು. ಅನಂತರ ತಾಯಿಗೌರಿಗೆ “ ನಿನ್ನ ಆಶೀರ್ವಾದದಿಂದ ಯಾತ್ರೆ ಸುಸೂತ್ರವಾಗಿ ನೆರವೇರಿತಮ್ಮ ” ಎಂದು ಪ್ರಣಾಮ ಸಲ್ಲಿಸಿದೆವು.

## ೧೨

# ಉಖೀಮಠ

೧೮ ನೇ ತಾರೀಖು ಮಂಗಳವಾರ ಬೆಳಿಗ್ಗೆ ಪುನಃ ಗೌರೀಕುಂಡಕ್ಕೆ ಹೋಗಿ ಸ್ನಾನ ಮಾಡಿದೆವು. ಎರಡುದಿನದ ಬಟ್ಟೆಗಳು ಇದ್ದುವು ಒಗೆಯುವುದಕ್ಕೆ. ಬಿಸಿನೀರಿನ ಕುಂಡದಿಂದ ನೀರು ಹರಿದು ಮಂದಾಕಿನಿಗೆ ಸೇರುತ್ತಿದ್ದ ಕಡೆ ಬಿಸಿ ನೀರಿನಲ್ಲೇ ಬಟ್ಟೆ ಒಗೆದೆವು. ಕೇದಾರನಾಥದ ಯಾತ್ರೆ ಪೂರೈಸಿದ ವಿಚಾರವಾಗಿ ನಮ್ಮೊಡನೆ ಬಂದವರೆಲ್ಲ ಸ್ನೇಹಿತರು ನೆಂಟರಿಷ್ಟರಿಗೆ ಕಾಗದ ಬರೆಯತೊಡಗಿದರು. ತಮ್ಮ ಸ್ನೇಹಿತರನ್ನು, ನೆಂಟರನ್ನು ಕೆಲಕಾಲ ಮರೆತಂತಿದ್ದರು. ಆದರೆ ಈಗ ಅವರಮೇಲೆ ಮಮತೆ ದ್ವಿಗುಣವಾಗಿ ಬಂತು. ಮುಕ್ಕಾಲುಪಾಲು ಮಾನವರಿಗೆ ಯಾವುದಾದರೂ ಪ್ರಾಪಂಚಿಕ ವ್ಯಕ್ತಿಯ ಮೇಲೆ ಪ್ರೇಮವಿಡದೆ ಇದ್ದರೆ ಜೀವನ ಬರಡಾಗುವುದು. ಒಂದಲ್ಲದೆ ಇದ್ದರೆ ಇನ್ನೊಂದನ್ನು ತೆಗೆದುಕೊಳ್ಳುವರು. ಬಳ್ಳಿ ಹಬ್ಬಿ ಹೋಗಬೇಕಾದರೆ ಹೇಗೆ ಅದಕ್ಕೆ ಒಂದು ಆಸರೆ ಇರಬೇಕೋ ಹಾಗೆಯೇ ಮಾನವನ ಹೃದಯದೊಳಗಿಂದ ಏಳುವ ಒಲವಿನ ಬಳ್ಳಿಗೆ ಆಸರೆ ಏನಾದರೂ ಇರಬೇಕು. ಪ್ರೀತಿಸುವ ವ್ಯಕ್ತಿಯಿಂದ ದೂರಹೋದರೂ ಅದನ್ನೇ ಚಿಂತಿಸುತ್ತಾ ಮುಂದೆ ಸಾಗುತ್ತಿರುವುದು. ಪ್ರೀತಿಸುವ ನೆನಪೇ ಬುತ್ತಿ, ಮುಂದೆ ಸಾಗುವಾಗ ಮಧ್ಯೆ ಮಧ್ಯೆ ಮೆಲ್ಲಬೇಕಾದರೆ. ಭಕ್ತ ಭಗವಂತನನ್ನು ಆಶ್ರಯಿಸಿಕೊಂಡು ಬೆಳೆಯುವನು. ಸಂಸಾರದಲ್ಲಿರುವವರು ತಮ್ಮ ನೆಚ್ಚಿನವರನ್ನು ಆಶ್ರಯಿಸಿಕೊಂಡು ಬೆಳೆಯುವರು. ಆ ನೆಚ್ಚಿನವರು ಹೋಗಿ ಭಗವಂತ ಎಂದು ಆ ಸ್ಥಳಕ್ಕೆ ಬರುವನೋ ಅಂದೇ ಆಧ್ಯಾತ್ಮಿಕ ಜೀವನ. ಒಂದು ಹೋಗಿ ಮತ್ತೊಂದು

ಬರಬೇಕಾದರೆ ಬಹಳ ಕಷ್ಟ. ಬಡಪೆಟ್ಟಿಗೆ ಹೋಗುವುದಿಲ್ಲ. ನಾವು ಪ್ರೀತಿಸುವುವಕ್ಕೆ ಹಿಡಿದ ವ್ಯಕ್ತಿ ಚೇಳಿನಂತೆ ಕುಟುಕಿದರೂ ಪುನಃ ಅದರ ಹತ್ತಿರ ಹೋಗುವೆವು. ಕಹಿಯಾದರೆ ಸಿಹಿ ಬೆರಸಿ ತಿನ್ನುವೆವು. ವ್ಯಕ್ತಿ ಗತಿಸಿಹೋದರೂ ಅದರ ನೆನಪಿನ ಶವವನ್ನು ಬಾಚಿ ತಬ್ಬುವೆವು. ನಮ್ಮ ಬಾಳೇ ಹೀಗೆ. ಅದಕ್ಕೇ ಶ್ರೀ ಕೃಷ್ಣ ಹೇಳುವುದು, “ ಲಕ್ಷದಲ್ಲಿ ಒಬ್ಬ ನನ್ನ ಕಡೆಗೆ ಬರುವುದಕ್ಕೆ ಪ್ರಯತ್ನಿಸುತ್ತಾನೆ ” ಎಂದು.

ಅಂದು ಮಧ್ಯಾಹ್ನ ಮೂರುಗಂಟೆಗೆ ಗೌರೀಕುಂಡವನ್ನು ಬಿಟ್ಟೆವು. ಇಲ್ಲಿಂದ ಘಾಟಚೆಟ್ಟಿಯವರೆಗೆ ದಾರಿಯಲ್ಲಿ ಗಿಡಮರಗಳು ತುಂಬಿವೆ. ಬಿಸಿಲು ಅಷ್ಟು ತಾಕಲಿಲ್ಲ. ಹೋಗುವಾಗಲೂ ಹತ್ತುವುದಿರಲಿಲ್ಲ. ಸ್ವಲ್ಪ ಇಳಿಜಾರು ಇಲ್ಲವೆ ಸಮವಾದ ರಸ್ತೆಯೇ ಆಗಿತ್ತು. ಗೌರೀಕುಂಡ ೬೦೦೦ ಅಡಿ ಎತ್ತರದಲ್ಲಿದೆ. ನಾವು ಸೇರಬೇಕಾದ ಘಾಟಚೆಟ್ಟಿ ೫೦೦೦ ಅಡಿ ಎತ್ತರ. ದಾರಿಯಲ್ಲಿ ಹೋಗುತ್ತಿರುವಾಗ ಮಳೆ ಬರುವ ಚಿಹ್ನೆ ಸ್ವಲ್ಪ ಕಂಡಿತು ಆದರೆ ಗಾಳಿ ಬಂದು ಮೋಡವನ್ನೆಲ್ಲ ಚೆದುರಿಸಿಕೊಂಡು ಹೊರಟು ಹೋಯಿತು. ಇದುವರೆಗೆ ನಡೆಯುವಾಗ ನಾವು ದಾರಿಯಲ್ಲಿ ಎಲ್ಲೂ ಭಾರೀ ಮಳೆಗೆ ಸಿಕ್ಕಲಿಲ್ಲ,

ದಾರಿಯ ಪಕ್ಕದಲ್ಲೆಲ್ಲ ಅಂಟಿಸಿದ ಮೂರು ಔಷಧಿಗಳ ಹೆಸರು ನಮಗೆ ಯಾವಾಗಲೂ ಕಾಣುವುದು. ಒಂದು ಶಿಲಾಜತ್ ಭಸ್ಮ, ಮತ್ತೊಂದು ಕಣ್ಣಿಗೆ ಹಾಕುವ ಅಂಜನ, ಮಮೀರಿಕಸುರಮಾ ಎಂಬುದು; ಇನ್ನೊಂದು ಕಸ್ತೂರಿ. ಹೃಷಿಕೇಶದಿಂದ ಹಿಡಿದು ಕೇದಾರ ಬದರೀವರೆಗೆ ಎಲ್ಲಿ ನೋಡಿದರೂ ಈ ಔಷಧಿಯ ಜಾಹಿರಾತುಗಳೇ ನಮ್ಮ ಕಣ್ಣಿಗೆ ಬೀಳುತ್ತಿರುತ್ತವೆ. ಮರದಮೇಲೆ, ಸೇತುವೆಯಮೇಲೆ, ಅಂಗಡಿಯಮೇಲೆ, ಬೆಟ್ಟ ಹತ್ತುವಾಗ, ಇಳಿಯುವಾಗ, ಕಣ್ಣುಹಾಕಿದ ಕಡೆಯೆಲ್ಲ ಇವೇ ಸರ್ವಾಂತರ್ಯಾಮಿಯಾಗಿ ಬಿಟ್ಟಿವೆ. ಅದರಲ್ಲೂ ಶಿಲಾಜಿತ್ ಅಂತೂ ಎಲ್ಲಕ್ಕಿಂತಲೂ ಹೆಚ್ಚು. ಅದೊಂದು ದೊಡ್ಡ ಟಾನಿಕ್ ಎಂದು ಜಾಹಿರಾತು ಮಾಡಿರುವರು. ಎಲ್ಲಾ ರೋಗಗಳಿಗೂ ಮತ್ತು ನಿತ್ರಾಣಕ್ಕೂ ರಾಮಬಾಣ ಎಂದು ಸಾರುವರು. ಅದನ್ನು ತೆಗೆದುಕೊಂಡರೆ ಶಿಲೆಯಂತೆ ಗಟ್ಟಿಮುಟ್ಟಾಗಿ ಆಗುವರೆಂದು ಚಿತ್ರಗಳು ಬೇರೆ ಇವೆ. ಜನಕ್ಕೆ ಬೇಕಾಗಿರುವುದು,

ಹೇಗೋ ಈ ಜೀವನದಲ್ಲಿ, ದೈಹಿಕ ಆನಂದವನ್ನು ಅನುಭವಿಸುವುದು. ಅದಕ್ಕೇ ತಂತ್ರ ಮಂತ್ರ ಔಷಧಿ ಎಲ್ಲಾ. ಆದರೆ ಷಡ್ವಿಕಾರಕ್ಕೆ ಒಳಗಾಗಿ ಹೋಗುವ ದೇಹವನ್ನು ಎಷ್ಟು ಔಷಧ ಟಾನಿಕ್ ಇವುಗಳ ಊರುಗೋಲು ಕೊಟ್ಟರೂ ನಿಲ್ಲಿಸುವುದಕ್ಕೆ ಆಗುವುದಿಲ್ಲ.

ಗ್ರಾಮ ಗ್ರಾಮಗಳಲ್ಲಿ ದೊಡ್ಡದೊಡ್ಡ ಅಕ್ಷರಗಳಲ್ಲಿ ಹಿಂದಿಯಲ್ಲಿ "ಪಂಚಾಯತ್ ರಾಜ್ಯ ರಾಮರಾಜ್ಯ ಹೈ" ಎಂಬ ಬೋರ್ಡ್ ಬೇರೆ. ಆಯಾ ಹಳ್ಳಿಯ ಕೆಲವು ಪ್ರಮುಖ ಮುಂದಾಳುಗಳ ಕೈಗೆ ಅಧಿಕಾರ ದೊರೆತು ಬಿಟ್ಟರೆ ರಾಮರಾಜ್ಯ ಕರಗತವಾದಂತೆ! ರಾಮರಾಜ್ಯ ನಮಗೆ ಇಷ್ಟು ಸುಲಭವಾಗಿ ಬಂದರೆ ನಮ್ಮನ್ನು ಹಿಡಿಯುವವರೇ ಇಲ್ಲ. ರಾಮನಂತೆ ನಾವಾದಾಗ, ನಮ್ಮ ನಾಯಕರಾದಾಗ, ರಾಮರಾಜ್ಯೋದಯ ಎಂಬುದನ್ನು ಮರೆಯುವೆವು. ಪಂಚಾಯಿತ ರಾಜ್ಯ ಬಂದರೆ ರಾಮರಾಜ್ಯ ಬಂದೀತೆ?

ಹೊರಗಿನ ವೇಷದ ಸುಧಾರಣೆಯಿಂದಲ್ಲ, ಹೃದಯದ ಮಾರ್ಪಾಟಿನಿಂದ ಮಾತ್ರ ಅದು ಸಾಧ್ಯ. ಬಂಡೆ ಬಂಡೆಗಳ ಮೇಲೆಲ್ಲ "ಊರು ಊರಿನಲ್ಲಿ ಒಂದೊಂದು ಪುಸ್ತಕ ಭಂಡಾರವಿರಲಿ" ಎಂದು ಬೇರೆ ಜಿಲ್ಲಾಬೋರ್ಡಿನವರು ಪ್ರಕಟಣೆ ಮಾಡಿರುವರು. ಪಾಪ, ಹಿಮಾಲಯದ ಕಲ್ಲು ಗಿಡ ಮರಗಳೆಲ್ಲ ಭಗವಂತನ ಹೆಸರನ್ನಲ್ಲ, ಔಷಧಿ, ಪಂಚಾಯಿತ ರಾಜ್ಯ, ಪುಸ್ತಕಭಂಡಾರದ ಹೆಸರನ್ನು ಹೊತ್ತು ತಪಸ್ಸು ಮಾಡುತ್ತಿವೆ.

ಅಂದು ರಾತ್ರಿ ಸುಮಾರು ಎಂಟು ಗಂಟೆಗೆ ಘಾಟಚಿಟ್ಟಿಯನ್ನು ಸೇರಿದೆವು. ಅಲ್ಲಿ ಚೆನ್ನಾಗಿ ಮಳೆಯಾಗಿತ್ತು, ಮತ್ತು ಆಗಲೂ ಸ್ವಲ್ಪ ಮಳೆ ಬೀಳುತ್ತಲೇ ಇತ್ತು, ಹಿಂದೆ ನಾವು ಇಳಿದುಕೊಂಡಿದ್ದ ಪ್ರವಾಸಿ ಗೃಹದಲ್ಲಿ ಹೆಲ್ತ್ ಡಿಪಾರ್ಟ್‌ಮೆಂಟಿನವರು ಇಳಿದುಕೊಂಡಿದ್ದರು. ಆ ಊರಿನ ಅಂಗಡಿ ಮುಂತಾದುವನ್ನು ಪರೀಕ್ಷಿಸುವುದಕ್ಕೆ ಬಂದಿದ್ದರು. ಆ ಡಿಪಾರ್ಟ್‌ಮೆಂಟಿಗೆ ಸೇರಿದ ಮೂರುನಾಲ್ಕು ಜನ ಅಂಗಡಿಯಿಂದ ಅಂಗಡಿಗೆ ಪರೀಕ್ಷಿಸುವುದಕ್ಕೆ ಹೋಗುತ್ತಾರೆ ಎಂಬುದನ್ನು ವರ್ತಕರು ತಿಳಿದುಕೊಂಡರು. ಅವರು ಬರುವಾಗ ನೊಣ ಮುತ್ತಿರುವ ತಿಂಡಿಯನ್ನೆಲ್ಲ ಒಳಗೆ ಬಚ್ಚಿಡುವರು. ಅವರು ಸ್ವಲ್ಪ ಮುಂದಕ್ಕೆ ಹೋದೊಡನೆಯೆ

ಅದನ್ನು ಪುನಃ ತಂದಿಡುವರು. ನಮಗೆ ಅಂದು ಆ ಗ್ರಾಮದಲ್ಲಿ ಸರಿಯಾಗಿ ಇಳಿದುಕೊಳ್ಳುವುದಕ್ಕೆ ಸ್ಥಳ ಸಿಕ್ಕಲಿಲ್ಲ. ನಾಗಪುರದಿಂದ ಸುಮಾರು ೨೦೦ ಜನರ ಯಾತ್ರಿಕರ ತಂಡವೊಂದು ಆ ಗ್ರಾಮದಲ್ಲಿ ಇಳಿದುಕೊಳ್ಳಲು ಬಂದು ಇದ್ದ ಸ್ಥಳವನ್ನೆಲ್ಲಾ ಆಕ್ರಮಿಸಿಕೊಂಡುಬಿಟ್ಟಿದ್ದರು. ಒಂದು ಅಂಗಡಿಯ ಮುಂದಿನ ಪಡಸಾಲೆಯಲ್ಲಿ ಮಲಗಬೇಕಾಯಿತು. ಅಲ್ಲಿ ಆಗಲೆ ಹಲವರಿದ್ದರು ಮೂಲೆ ಯಲ್ಲಿ ಕೆಲವರು ಅಡಿಗೆ ಮಾಡಿಕೊಳ್ಳುತ್ತಿದ್ದರು. ಮುಂದುಗಡೆಯಿಂದ ತಂಗಾಳಿ ಬೀಸುತ್ತಿತ್ತು. ಸೋನೆ ಮಳೆ ಬೇರೆ. ಎಷ್ಟೆಷ್ಟು ಪ್ರಯತ್ನಪಟ್ಟರೂ ಬಹಳ ಕಾಲದವರೆಗೆ ನಿದ್ರೆ ಬರಲಿಲ್ಲ. ಅದೇ ಊರಿನಲ್ಲಿ ಹಿಂದೆ ನಾವು ಬಂದಿದ್ದಾಗ ಪ್ರವಾಸಿ ಗೃಹದಲ್ಲಿ ಸುಖವಾಗಿ ಕಾಲ ಕಳೆದಿದ್ದೆವು. ಇಂದು ಅನಾಮಧೇಯ ರಾಗಿ ಭಿಕಾರಿಗಳಂತೆ ಕಾಲ ಕಳೆಯಬೇಕಾಯಿತು. ಸ್ವಲ್ಪ ನಿದ್ದೆ ಬಂತೋ ಇಲ್ಲವೊ, ಕನಸಿನಲ್ಲಿಯೂ ಗಂಟುಮೂಟೆ ಕಟ್ಟುತ್ತಿರುವುದು, ನಡೆಯುತ್ತಿರುವುದೇ ಚಿತ್ರ. ನಮ್ಮ ಜೀವನದ ಪೂರ್ವ ಸ್ಮೃತಿಯೆಲ್ಲ ಅಳಿಸಿಹೋಗಿತ್ತು. ಮೂಟೆ ಕಟ್ಟುವುದು ನಡೆಯುವುದೆ ನಮ್ಮ ಜಾಗ್ರತಾವಸ್ಥೆಯ ಮತ್ತು ಕನಸಿನ ಪ್ರಪಂಚ ಕೂಡ ಆಗಿಹೋಗಿತ್ತು.

೧೯ನೇ ತಾರೀಖು ಬುಧವಾರ ಎದ್ದೊಡನೆಯೇ ಟೀ ಕುಡಿದು ಹೊರಟೆವು. ಸುಮಾರು ಹತ್ತು ಗಂಟೆಹೊತ್ತಿಗೆ ನಲ್ಲಚೆಟ್ಟಿ ಎಂಬ ಗ್ರಾಮಕ್ಕೆ ಬಂದೆವು. ಇಲ್ಲಿಂದ ಎಡಗಡೆಗೆ ಒಂದು ರಸ್ತೆ ಚಮೋಲಿ ಕಡೆಗೆ ಕವಲೊಡೆಯುವುದು. ಮತ್ತೊಂದು ರಸ್ತೆ ಗುಪ್ತ ಕಾಶಿ ಕಡೆಗೆ ಹೋಗುವುದು. ನಾವು ಈಗ ಚಮೋಲಿ ಕಡೆ ಹೋಗಬೇಕಾಗಿತ್ತು. ಇಲ್ಲಿಂದ ಒಂದೂವರೆ ಮೈಲಿ ಇಳಿಯಬೇಕು. ಅನಂತರ ಮಂದಾಕಿನಿ ನದಿಯನ್ನು ದಾಟಿ ಒಂದೂವರೆ ಮೈಲಿ ಹತ್ತಿ ಹೋದರೆ ಉಖೀಮಠ ಸೇರುತ್ತೇವೆ, ಬಿಸಿಲು ಏರಿದ್ದುದರಿಂದ ಅಲ್ಲೇ ಒಂದು ಕಡೆ ತಂಗಿ ಊಟಮಾಡಿ ವಿರಾಮ ತೆಗೆದುಕೊಂಡನಂತರ ನಾಲ್ಕುಗಂಟೆಗೆ ಅಲ್ಲಿಂದ ಹೊರಟೆವು ಒಂದೂವರೆ ಮೈಲಿ ಕೆಳಗಿಳಿದರೆ ಮಂದಾಕಿನಿ ನದೀತಿರದಲ್ಲಿ ಒಂದು ವಿದ್ಯಾಸಂಸ್ಥೆ ಇದೆ. ಇಲ್ಲಿ ಹೈಸ್ಕೂಲು, ಆಯುರ್ವೇದ ಪಾಠಶಾಲೆ ಮುಂತಾದುವೆಲ್ಲ ಇವೆ. ಇಲ್ಲಿಂದ ನಾವು ಕಬ್ಬಿಣದ ತೂಗು ಸೇತುವೆಯಿಂದ ಮಂದಾಕಿನಿನದಿ ದಾಟಿ ಆ ಕಡೆಗೆ ಹೋದೆವು. ಇನ್ನುಮೇಲೆ ನಾವು ಮಂದಾಕಿನಿ ನದಿಯನ್ನು ನೋಡು

ವಂತಿಲ್ಲ. ಅದನ್ನು ಮನದಲ್ಲಿಯೇ ಬೀಳ್ಕೊಟ್ಟೆವು. ರುದ್ರಪ್ರಯಾಗದಿಂ ಕೇದಾರನಾಥಕ್ಕೆ ಹೋಗಿ ಇಲ್ಲಿಗೆ ಬರುವವರೆಗೆ ಅವಳು ನಮ್ಮ ಜೊತೆಗಾ ಯಾಗಿ ಮಾರ್ಗದರ್ಶಕಿಯಾಗಿದ್ದಳು. ನಡೆಯುತ್ತಿರುವಾಗಲೆಲ್ಲ ಮಂದಾಕಿನಿಯ ಹರಹರ ಮಹದೇವ ಎಂಬ ಧ್ವನಿಯನ್ನು ನಾವು ಆಲಿಸಬಹುದಾಗಿತ್ತು. ಅದ ನಮ್ಮ ಯಾತ್ರೆಯ ಹಿನ್ನೆಲೆಯ ಸಂಗೀತದಂತಿತ್ತು. ಆ ನದೀತೀರದಲ್ಲಿ ನಾವ ಸುಖಪಟ್ಟಿದ್ದೆವು, ಕಷ್ಟಪಟ್ಟಿದ್ದೆವು. ಸುಮಾರು ಹತ್ತುದಿನಗಳು ಹಗಲು ರಾತ್ರ ನಮ್ಮೊಡನೆ ಇದ್ದ ಆ ಮಂದಾಕಿನಿನದಿ ನನಗೊಂದು ವ್ಯಕ್ತಿಯಂತೆ ಆಗ ಹೋಗಿತ್ತು. ಆ ಹಿರಿ ಅಕ್ಕನಿಗೆ ಮನದಲ್ಲಿಯೇ ವಂದಿಸಿ ಉಖೀಮಠವಕಡ ತಿರುಗಿದೆ. ಚಮೋಲಿ ಸೇರುವವರೆಗೆ ಇನ್ನಾವ ನದಿಯೂ ನಮ್ಮ ಸಂಗಾತಿಯಾಗ ರುವುದಿಲ್ಲ. ಅಲ್ಲಿಂದ ಸುಮಾರು ಒಂದು ಸಾವಿರ ಅಡಿ ಹತ್ತಿಕೊಂಡು ಹೋದರ ಉಖೀಮಠ ಸಿಕ್ಕುವುದು. ಅದೊಂದು ಬೆಟ್ಟದ ಮೇಲಿದೆ. ಸಮುದ್ರದ ಎತ್ತರಕ್ಕೆ ೪೨೦೦ ಅಡಿ ಇದೆ. ಅದರ ಎದುರುಗಡೆ ಹಿಂದೆ ನಾವು ತಂಗಿದ್ದ ಗುಪ್ತಕಾ ಇದೆ. ಹಕ್ಕಿಯಂತೆ ಹಾರಿಹೋದರೆ ಸುಮಾರು ಎರಡು ಫರ್ಲಾಂಗು ಇರಬಹುದು ಆದರೆ ಪಾದಚಾರಿಗಳಾಗಿ ಹೋದರೆ ಸುಮಾರು ಮೂರು ಮೈಲಿ ಇಳಿದ ಹತ್ತಬೇಕು.

ಉಖೀಮಠದಲ್ಲಿ ಕೇದಾರನಾಥಸ್ವಾಮಿಗಳು ಇರುವರು. ಚಳಿಗಾಲದಲ್ಲಿ ಉತ್ಸವ ಮೂರ್ತಿಯನ್ನು ಕೇದಾರದಿಂದ ಇಲ್ಲಿಗೆ ತಂದು ಆರು ತಿಂಗಳು ಇಲ್ಲಿ ಪೂಜೆ ಮಾಡುವರು. ಬಾಣಾಸುರನ ಮಗಳು ಉಷಾ ಇದನ್ನು ಕಟ್ಟಿಸಿದುದರಿಂ ಇದನ್ನು ಉಷಾಮಠ ಎಂದು ಕರೆಯುವರು. ಉಖೀ ಎನ್ನುವುದು ಅದ ಅಪಭ್ರಂಶ. ದೇವಸ್ಥಾನದೊಳಗೆ ಶಿವಲಿಂಗವಿದೆ. ಪಾರ್ವತಿ ವಿಗ್ರಹವಿದೆ ಜೊತೆಗೆ ಶ್ರೀಕೃಷ್ಣನ ಮಗ ಅನಿರುದ್ಧ ಮತ್ತು ಅವನ ಹೆಂಡತಿ ಉಷಾ ಇರುವರು ಮಾಂಧಾತರಾಜ ಎನ್ನುವ ಮತ್ತೊಂದು ವಿಗ್ರಹ ಬೇರೆ ಇದೆ. ಬಹುಶಃ ಈತನೆ ಕ್ರಮೇಣ ಈ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿರಬೇಕು. ಈ ದೇವಸ್ಥಾನದ ಆಡಳಿತದೊಳಗೆ ಪಂಚಕೇದಾರದ ದೇವಸ್ಥಾನಗಳು ಬರುವುವು ಅದೇ ಕೇದಾರನಾಥ, ಮಧ್ಯಮೇಶ್ವರ, ತುಂಗನಾಥ, ರುದ್ರನಾಥ ಮತ್ತು ಕಲ್ಪೇಶ್ವರ. ಇವುಗಳಲ್ಲಿ ಕೇದಾರನಾಥ ತುಂಗನಾಥರನ್ನು ಮಾತ್ರ ನೋಡಲು

ಸಾಧ್ಯ. ಉಳಿದವಕ್ಕೆ ಸರಿಯಾದ ರಸ್ತೆ ಇಲ್ಲ. ಸಾಧಾರಣ ಯಾತ್ರಿಕರಿಗೆ ಇದು ಅಸಾಧ್ಯ. ಉಖೀಮಠದಲ್ಲಿ ಅಲ್ಲಿಯ ಸ್ವಾಮಿಗಳೊಂದಿಗೆ ಮಾತೂಕತೆಯಾಡಿದೆ. ಅವರು ಹಾವೇರಿ ಕಡೆಯಿಂದ ಬಂದ ಪಂಚಾಚಾರ್ಯ ಪಂಗಡಕ್ಕೆ ಸೇರಿದವರು. ಕನ್ನಡ ಮಾತನಾಡುತ್ತಾರೆ. ಅವರೊಡನೆ ಪೂಜೆ ಮುಂತಾದುವನ್ನು ಮಾಡುವುದಕ್ಕೆ ದಾವಣಗೆರೆ ಕಡೆಯಿಂದ ಇಬ್ಬರಿರುವರು. ಬಹಳ ಕಾಲ ಅವರು ಇಲ್ಲಿರುವುದರಿಂದ ಅವರ ಕನ್ನಡ ಭಾಷೆಗೆಲ್ಲ ಹಿಂದೀ ಧಾಳಿಯಿಟ್ಟದೆ. ಅಪರೂಪವಾಗಿ ಈ ಹಿಮಾಲಯದ ಪ್ರಾಂತ್ಯದಲ್ಲಿ ಕನ್ನಡ ಮಾತನಾಡುವವರು ಸಿಕ್ಕಿದಾಗ ನನಗೆ ಸ್ವಲ್ಪ ಆನಂದವೇ ಆಯಿತು. ಮಾತೃಭಾಷೆ ಮಾತೃದೇಶ ಎನ್ನುವುದರ ಆಕರ್ಷಣೆ ಅಷ್ಟು ಅದ್ಭುತವಾದುದು. ಇದು ಯಾರನ್ನೂ ಬಿಟ್ಟಿಲ್ಲ. ದೂರ ಹೋದಾಗ ಅದರ ಸೆಳೆತ ನಮಗೆ ಅರಿವಾಗುವುದು. ಎಲ್ಲಿಯವರೆವಿಗೂ ನಾವು ಭೂಮಿಯ ಮೇಲೆ ಓಡಾಡುತ್ತಿರುವೆವೋ ಅಲ್ಲಿಯವರೆಗೆ ಆಕರ್ಷಣ ಶಕ್ತಿ ನಮ್ಮನ್ನು ಯಾವ ವೇಗದಿಂದ ಸೆಳೆಯುತ್ತಿದೆ ಎಂಬುದರ ಅರಿವು ನಮಗೆ ಆಗುವುದಿಲ್ಲ. ಅದರಿಂದ ದೂರ ಹೋಗಬೇಕು ಎಂದು ನೆಗೆಯಲು ಯತ್ನಿಸಿದಾಗ ಮಾತ್ರ ಅದರ ಅರಿವಾಗುವುದು. ಹಾಗೆಯೇ ನಮ್ಮ ಭಾಷೆಯ ಮಮತೆ ಮಾತನಾಡುವವರೊಡನೆ ಇರುವಾಗ ಅದರ ಅರಿವಾಗುವುದಿಲ್ಲ. ಅದರಿಂದ ದೂರವಿರುವಾಗ ಅರಿವಾಗುವುದು. ಸ್ವಾಮಿಜಿ ಅವರು ಸೌಹಾರ್ಧದಿಂದ ಕುಶಲಪ್ರಶ್ನೆ ಮಾಡಿದರು. ಆದರೆ ಕನ್ನಡದವರು ಯಾವಾಗ ಈ ಪೀಠಕ್ಕೆ ಬಂದರು, ಅದರ ಐತಿಹ್ಯವೇನು ಎಂದು ಕೇಳಿದಾಗ ಸಮರ್ಪಕವಾದ ಉತ್ತರ ಸಿಗಲಿಲ್ಲ.

ಇದುವರೆಗೆ ಪ್ರಪಂಚದ ಗಡಿಬಿಡಿಯನ್ನು ತಿಳಿದುಕೊಳ್ಳಲು ನಮಗೆ ಯಾವ ಪೇಪರೂ ಸಿಕ್ಕಿರಲಿಲ್ಲ. ಇಲ್ಲಿ ಅಂಗಡಿಯವನೊಬ್ಬನು ಆಂಗ್ಲೇಯ ಪತ್ರಿಕೆಯನ್ನು ತರಿಸುತ್ತಿದ್ದ. ಅದನ್ನು ನೋಡಿದಾಗ ಅದರ ಕುಡಿಯಿಂದ ಬಾಹ್ಯ ಪ್ರಪಂಚದಲ್ಲಿ ಆಗುವ ಘಟನೆಗಳ ಸದ್ದು ಕೇಳಿಸಿತು. ಇಂಡಿಯಾ ದೇಶದ ಪ್ರೆಸಿಡೆಂಟರು ಕಾಶ್ಮೀರ ಇಂಡಿಯಾ ಯೂನಿಯನ್ನಿಗೆ ಸೇರಿತು ಎಂದು ಘೋಷಿಸಿದ್ದರು.

ತಂಗಿದ್ದ ಧರ್ಮಶಾಲೆಗೆ ಬಂದು ಕೆಲಕಾಲ ಶಿವನನ್ನು ಚಿಂತಿಸಿ ದಣಿದಿದ್ದುದರಿಂದ ಮಲಗಿದೆ. ಅಲ್ಲಿ, ಆ ಕನಸಿನಲ್ಲಿಯೂ ನಡೆಯುತ್ತಿರುವುದೇ. ಯಾವುದೋ

ದೇವಸ್ಥಾನಕ್ಕೆ ಹೋಗುತ್ತಿರುವುದು, ಹಳ್ಳ ದಿಣ್ಣೆಗಳನ್ನು ದಾಟುತ್ತಿರುವುದು, ಮಂದಾಕಿನಿಯ ಮಂಗಳ ನಿನಾದವನ್ನು ಕೇಳುತ್ತಿರುವುದೇ ಕನಸಿನ ದೃಶ್ಯವಾಗಿತ್ತು. ಹಿಮಾಲಯದ ವಾತಾವರಣ ನಮ್ಮ ಜೀವನದಲ್ಲಿ ಓತಪ್ರೋತವಾಗಿತ್ತು. ಹಗಲು ರಾತ್ರಿ, ಜಾಗ್ರತ್ ಸ್ವಪ್ನ, ಜೀವನದ ಯಾವ ಭಾಗವನ್ನು ಹಿಂಡಿದರೂ ಯಾತ್ರೆಗೆ ಸಂಬಂಧಪಟ್ಟ ನೆನಹುಗಳೇ ಜಿನುಗುತ್ತಿದ್ದವು.

೧೩

# ತುಂಗನಾಥ

೨೦ ನೇ ತಾರೀಖು ಗುರುವಾರ ಎಂದಿನಂತೆ ಬೆಳಿಗ್ಗೆ ಐದು ಗಂಟೆಗೆ ಹೊರಟೆವು. ಇಲ್ಲಿಯವರೆಗೆ ನಮಗೆ ತರಕಾರಿಯೆಂದರೆ ಬರೇ ಈರುಳ್ಳಿ ಆಲೂಗೆಡ್ಡೆಯಲ್ಲದೆ ಬೇರೇನೂ ದೊರಕುತ್ತಿರಲಿಲ್ಲ. ಬರಬರುತ್ತ ನಮ್ಮ ಬಾಯಿಗೆ ಅದು ಹಿಡಿಸುತ್ತಿರಲಿಲ್ಲ. ದಕ್ಷಿಣದಿಂದ ಬರುವವರಿಗೆ ಮಜ್ಜಿಗೆ ಅನ್ನ ತಿಂದು ರೂಢಿ. ಇಲ್ಲಿ ನಮಗೆ ಹಾಲು ತೊರೆತರೂ ಎಲ್ಲಿಯೂ ಮೊಸರೇ ದೊರೆಯುತ್ತಿರಲಿಲ್ಲ. ಅದನ್ನು ಮೊಸರು ಮಾಡಬೇಕೆಂದು ನಾವು ಎಷ್ಟು ಪ್ರಯತ್ನಪಟ್ಟರೂ ಆಗುತ್ತಿರಲಿಲ್ಲ. ಎರಡು ದಿನ ಹೆಪ್ಪುಹಾಕಿ ಇಟ್ಟರೂ ಹಾಲು ಹಾಗೇ ಇರುತ್ತದೆ. ಅದು ಹಾಕಿರುವ ಚೊಂಬನ್ನು ದಾರಿಯಲ್ಲಿ ಹಿಡಿದು ಹೋಗುತ್ತಿರುವಾಗ ಹಾಲನ್ನು ಕಡೆದಂತೆ ಆಗಿ ಬೆಣ್ಣೆ ಬರುತ್ತದೆಯೇ ವಿನಃ ಅದೇನು ಒಡೆದಾದರೂ ಮೊಸರಾಗುವುದಿಲ್ಲ. ಯಾವಾಗಲಾದರೂ ದಾರಿಯಲ್ಲಿ ಒಂದು ವಿಧವಾದ ದಪ್ಪ ನಿಂಬೆಹಣ್ಣು ಸಿಕ್ಕುತ್ತಿತ್ತು. ಅದನ್ನು ತೆಗೆದುಕೊಂಡು ಇಡುತ್ತಿದ್ದೆವು. ಅನ್ನ ಮಾಡುವಾಗ ಅದರ ಗಂಜಿ ತೆಗೆದು ಅದಕ್ಕೆ ಈ ನಿಂಬೇಹಣ್ಣನ್ನು ಹಿಂಡಿ ಸ್ವಲ್ಪ ಮೆಣಸಿನ ಕಾಯಿ ಒಗ್ಗರಣೆ ಕೊಟ್ಟು ಇದೇ ಮಜ್ಜಿಗೆ ಎಂದು ಭಾವಿಸಿ, ಭ್ರಮಿಸಿ, ಅದನ್ನು ತೆಗೆದು ಕೊಳ್ಳುತ್ತಿದ್ದೆವು. ಅಲ್ಲಿ ಸಾಸುವೆ ಸಿಕ್ಕುತ್ತಿರಲಿಲ್ಲ. ಅಲ್ಲೆಲ್ಲ ಜನ ಉಪಯೋಗಿಸುವುದು ಸಾಸುವೆ ಎಣ್ಣೆಯಾದರೂ ಒಗ್ಗರಣೆಗೆ ಹಾಕಬೇಕಾದರೆ ಅಂಗಡಿಯಲ್ಲಿ ಸಾಸುವೆ ಸಿಕ್ಕುತ್ತಿರಲಿಲ್ಲ. ಅವರಿಗೆ ಹಸಿ ಸಾಸುವೆಯನ್ನು ಜನ

ತಿನ್ನುತ್ತಾರೆಯೇ ಎಂದು ಆಶ್ಚರ್ಯ. ನಮಗೆ ಜನ ಸಾಸುವೆ ಎಣ್ಣೆ ಊಟಕ್ಕೆ ಉಪಯೋಗಿಸುತ್ತಾರೆಯೇ ಎಂದು ಆಶ್ಚರ್ಯ.

ಮೂರು ಮೈಲಿ ಒಂದೇಸಮನಾದ ರಸ್ತೆಯಲ್ಲಿ ನಡೆದಾದಮೇಲೆ ಪುನಃ ೫೦೦ ಅಡಿಗಳು ಕೆಳಗೆ ಇಳಿಯಬೇಕಾಯಿತು. ಅಲ್ಲಿಂದ ಸುಮಾರು ೧೦೦೦ ಅಡಿ ಏರಿದಮೇಲೆ ಒಂದು ಗ್ರಾಮ ಸಿಕ್ಕುವುದು. ಅಂಗಡಿಯಲ್ಲಿ ಬಿಸಿ ಪೂರಿ ತಿಂದು ಟೀ ಕುಡಿದು ಮುಂದೆ ಹೊರಟೆವು. ಇಲ್ಲಿಂದ ಮುಂದಕ್ಕೆ ಬನಿಯ ಕುಂಡವೆಂಬ ಊರನ್ನು ಸೇರುವವರೆಗೆ ಬರೀ ಏರುವ ರಸ್ತೆ. ಅದಕ್ಕೆ ದೂರ ಸುಮಾರು ಮೂರು ಮೈಲಿಗಳು. ಈ ಗ್ರಾಮ ಇದ್ದದ್ದು ಸುಮಾರು ೫೫೦೦ ಅಡಿ ಎತ್ತರದಲ್ಲಿ. ಬನಿಯ ಕುಂಡ ಇದ್ದುದು ೭೭೦೦ ಅಡಿಗಳ ಎತ್ತರದಲ್ಲಿ. ಒಂದೇ ಸಮನಾಗಿ ಏರಿಕೊಂಡು ಹೋಗಬೇಕು. ಬಿಸಿಲು ಇದ್ದರೂ ನಾವು ಒಂದು ದಟ್ಟ ಕಾಡಿನಲ್ಲಿ ಹೋಗುತ್ತಿರುವಾಗ ಅಷ್ಟು ಕಾಣಿಸುವುದಿಲ್ಲ, ಮೇಲಕ್ಕೆ ನೇರವಾಗಿ ತೇರಿನಂತೆ ಬೆಳೆದಿರುವ ಪೈನ್ ಮತ್ತು ದೇವದಾರು ಮರಗಳು ನೋಡುವುದಕ್ಕೆ ಮನೋಹರವಾಗಿರುವುದು ಈ ಸ್ಥಳದಲ್ಲಿ. ಹಲವು ಬಗೆಯ ಹೂ ಗಿಡಗಳು ದಾರಿಯಲ್ಲಿ ಇರುವುವು. ಎಲ್ಲಕ್ಕಿಂತ ಚಿತ್ತಾಕರ್ಷಕವಾಗಿರುವ ದೃಶ್ಯವೇ ಗುಲಾಬಿಬಳ್ಳಿಯನ್ನುಟ್ಟ ಮರಗಳು. ನಲವತ್ತು ಐವತ್ತು ಅಡಿ ಎತ್ತರದ ಮರದ ಸುತ್ತಲೂ ಗುಲಾಬಿ ಗಿಡದ ಬಳ್ಳಿಗಳು ಹಾಸುಹೊಕ್ಕಾಗಿರುತ್ತವೆ. ಅದರಲ್ಲೆಲ್ಲಾ ನಾಲ್ಕು ನಾಲ್ಕು ದಳದ ಹೂಗಳು ತುಂಬಿಹೋಗಿರುತ್ತವೆ. ನಾವು ಹತ್ತಿರ ಹೋದಾಗ ಪಥಿಕರಿಗೆ ಸುಗಂಧವನ್ನು ಎರಚುವಂತೆ ಇರುವುದು. ಗಾಳಿಗೆ ಆ ಗಿಡ ನಲಿದಾಡುವಾಗಲಂತೂ ಗುಲಾಬಿಯ ಲತೆಯನ್ನುಟ್ಟ ತರುವೆಣ್ಣುಗಳು ನೃತ್ಯ ಮಾಡುತ್ತಿರುವಂತೆ ಭಾಸವಾಗುವುದು. ಇದನ್ನೆಲ್ಲಾ ನೋಡಿಕೊಂಡು ನಾವು ಬನಿಯ ಕುಂಡಕ್ಕೆ ಬರುವ ಹೊತ್ತಿಗೆ ಸುಮಾರು ಹನ್ನೊಂದುಗಂಟೆ ಆಗಿಹೋಗಿತ್ತು. ಅಲ್ಲಿ ಧರ್ಮಶಾಲೆಯಲ್ಲಿ ಇಳಿದೆವು. ಮುಂಚೆ ಬಂದವರಲ್ಲಿ ನಾವು ಮೂರು ಜನ ಇದ್ದೆವು. ಅಡಿಗೆಯವನು ಕೂಲಿಗಳು, ಇನ್ನೂ ಬಹಳ ಹಿಂದೆ ಇದ್ದರು. ಅವರು ಬರುವವರೆಗೆ ಅಡಿಗೆ ಮಾಡುವುದಕ್ಕೆ ಕಾದರೆ ಬಹಳ ಹೊತ್ತಾಗುವುದೆಂದು ನಾವೆ ಅಂಗಡಿಯವನಿಂದ ಸಾಮಾನು ಪಾತ್ರೆ ತಂದು ಒಲೆ ಹತ್ತಿಸಿ ಅಡಿಗೆಗೆ ಪ್ರಾರಂಭಿಸಿದೆವು. ಹಿಂದೆ ಬರುತ್ತಿದ್ದವರಿಗೆ ನಡೆದು ಸಾಕಾಗಿತ್ತು. ಅವರು ಇದಕ್ಕೆ

ಎರಡು ಮೈಲಿ ದೂರದಲ್ಲಿರುವ ಒಂದು ಗ್ರಾಮದಲ್ಲೇ ತಂಗಬೇಕೆಂದು ಮನಸ್ಸು ಮಾಡಿದ್ದರು. ಆದರೆ ನನ್ನ ಬಲಾತ್ಕಾರಕ್ಕೆ ನಿರ್ವಾಹವಿಲ್ಲದೆ ಕಾಲನ್ನು ಎಳೆದು ಹಾಕಿಕೊಂಡು "ಎಷ್ಟುದೂರ ನಡೆಸಿಕೊಂಡು ಬಂದು ಬಿಟ್ಟರು ಇವತ್ತು ನಮ್ಮನ್ನು" ಎಂದು ಗೊಣಗಾಡಿಕೊಂಡೇ ಬರುತ್ತಿದ್ದರು. ಅವರಿಗೆ ದಾರಿಯಲ್ಲಿ ನೀರು ಬೇರೆ ಸಿಕ್ಕಲಿಲ್ಲ ಕುಡಿಯುವುದಕ್ಕೆ. ಬಿಸಿಲು, ಜೊತೆಗೆ ನಡೆದು ಬೇರೆ ಸಾಕಾಗಿತ್ತು. ನಾವು ಬಂದ ಒಂದು ಗಂಟೆಯಮೇಲೆ ಅವರು ನನ್ನ ಮೇಲೆ ಉಗ್ರ ಕೋಪದಿಂದಲೇ ಪ್ರವೇಶಿಸಿದರು. ಆದರೆ ಆ ಸಮಯದಲ್ಲಿ ಅಡಿಗೆಮನೆ ಯಲ್ಲಿ ನಾನಿದ್ದೆ. ಹಿಂದಿನದಿನ ಕೊಂಡ ನಿಂಬೇಹಣ್ಣನ್ನು ಹಿಂಡಿ ತಂಪಾದ ಶರಬತ್ತು ಮಾಡಿ ಇವರಿಗೆ ಮುಂಚೆ ಕಳುಹಿಸಿದೆ. ಅವರು ಶರಬತ್ತು ಕುಡಿದು ಬಾಯಾರಿಕೆ ಪರಿಹರಿಸಿಕೊಂಡಮೇಲೆ ಸ್ವಲ್ಪ ನನ್ನ ಮೇಲಿನ ಕೋಪದ ಕಿಡಿ ಯಾರಿ ಹಿಂದಿನ ಮನುಷ್ಯರಾದರು.

ಬನಿಯಕುಂಡ ನಾವು ಇದುವರೆಗೆ ಇಳಿದುಕೊಂಡ ಗ್ರಾಮಗಳಲ್ಲೆಲ್ಲಾ ಬಹಳ ರಮ್ಯವಾದ ಸ್ಥಳದಲ್ಲಿದೆ. ಎತ್ತರ ಸುಮಾರು ೭೭೦೦ ಅಡಿಗಳು. ಅದರ ಎಡಗಡೆ, ನಾನಾ ಶಿಖರಗಳನ್ನು ಒಳಗೊಂಡ ಹಿಮಾಲಯದ ಸಾಲು ದೂರದಲ್ಲಿ ಗೋಚರಿಸುವುದು. ಬೃಹದಾಕಾರದ ದೇವದಾರುಗಳಂತೂ ಅಸಂಖ್ಯಾತವಾದ ತೇರುಗಳನ್ನು ಅಲಂಕರಿಸಿ ಇಟ್ಟಂತೆ ಕಾಣುವುವು. ಧರ್ಮಶಾಲೆ ಒಂದು ರಮಣೀಯವಾದ ವಾತಾವರಣದಲ್ಲಿದೆ. ನಾವು ಅಲ್ಲಿ ಇಂದು ತಂಗಿ ವಿಶ್ರಾಂತಿ ತೆಗೆದುಕೊಂಡು ಮಾರನೆ ದಿನ ಬೆಳಿಗ್ಗೆ ಸುಮಾರು ಮೂರು ಮೈಲಿ ದೂರದಲ್ಲಿ ರುವ ತುಂಗನಾಥಕ್ಕೆ ಹೋಗುವುದೆಂದು ನಿಶ್ಚಯಿಸಿದೆವು.

ಬನಿಯಕುಂಡದಿಂದ ತುಂಗನಾಥಕ್ಕೆ ಮೂರು ಮೈಲಿಗಳಾದರೂ ಆ ಮೂರು ಮೈಲಿಯಲ್ಲಿ ಸುಮಾರು ಐದುಸಾವಿರ ಅಡಿ ಏರಿ ಹೋಗಬೇಕು. ಇದುವರೆಗೆ ನಾವು ಹತ್ತಿದ ಸ್ಥಳಗಳಲ್ಲಿ ಗೌರೀಕುಂಡದಿಂದ ಕೇದಾರನಾಥವೇ ಕಷ್ಟವಾಗಿತ್ತು. ಆದರೆ ಇದು ಅದಕ್ಕಿಂತಲೂ ಕಷ್ಟವೆಂದೆನಿಸಿತು. ಬೆಳಗ್ಗೆ ನಮ್ಮ ನಿತ್ಯಕರ್ಮವನ್ನು ತೀರಿಸಿಕೊಂಡು ಸುಮಾರು ಏಳೂವರೆ ಗಂಟೆಗೆ ಹೊರಟೆವು. ರಸ್ತೆ ಚೆನ್ನಾಗಿದೆ. ಆದರೆ ಬಹಳ ಕಡಿದು. ಹಿಂದಿನ ಕಾಲದಲ್ಲಿ ರಸ್ತೆ ಕೂಡ ಚೆನ್ನಾಗಿರಲಿಲ್ಲವಂತೆ. ಕಲ್ಕತ್ತೆಯ ಒಬ್ಬ ದೊಡ್ಡ ಭಕ್ತ ಸುಮಾರು

ಆರು ಲಕ್ಷ ರೂಪಾಯಿ ಖರ್ಚುಮಾಡಿ ತುಂಗನಾಥ ಹತ್ತಿ ಪುನಃ ಬೇರೆ ಕಡೆ ಇಳಿದು ಹೋಗುವುದಕ್ಕೆಂದು ಆರು ಮೈಲಿ ರಸ್ತೆ ಮಾಡಿಸಿರುವನು. ಆತ ವರುಷಕ್ಕೆ ಒಮ್ಮೆ ಅಲ್ಲಿಗೆ ಬಂದು ಹೋಗುತ್ತಾನಂತೆ. ಆ ರಸ್ತೆ ಮಾಡಿಸುವುದಕ್ಕೆ ಮುಂಚೆ ಎಲ್ಲೋ ಕೆಲವು ಕಷ್ಟಸಹಿಷ್ಣುಗಳಾದ ಸಾಧುಸಂತರು ಮಾತ್ರ ಹೋಗುತ್ತಿದ್ದರು. ಆದರೆ ಈಗ ಅನೇಕ ಜನ ಹೋಗುತ್ತಿರುವರು. ಆ ಶ್ರೀಮಂತ ಭಕ್ತನ ಸೇವೆ ಸ್ತುತ್ಯಾರ್ಹ.

ಬೆಟ್ಟವನ್ನು ಹತ್ತಿ ಹೋಗುವಾಗ ನೇರವಾಗಿ ಕಡಿದಾದ ರಸ್ತೆ ಕಾಣುವುದಿಲ್ಲ. ಸುತ್ತಿ ಸುತ್ತಿಕೊಂಡು ಹೋಗಬೇಕು. ನಮ್ಮೆದುರಿಗೆ ಕೇವಲ ನಲವತ್ತು-ಐವತ್ತು ಅಡಿಗಳಷ್ಟು ರಸ್ತೆಮಾತ್ರ ಕಾಣುವುದು. ಮುಂದಿರುವ ಕಡಿದು ನಮಗೆ ಗೋಚರಿಸುವುದಿಲ್ಲ. ಒಂದು ದೃಷ್ಟಿಯಿಂದ ಇದೊಂದು ದೊಡ್ಡ ವರವೆಂದೇ ಭಾವಿಸಬೇಕು. ಸುಮಾರು ಐದುಸಾವಿರ ಅಡಿ ಕಡಿದಾದ ರಸ್ತೆಯೂ ಒಮ್ಮೆಯೇ ಪಥಿಕನಿಗೆ ಕಾಣಿಸಿದರೆ ಅವನ ಎದೆ ತಲ್ಲಣಿಸುವುದು. ನಿಜವಾಗಿ ಅದನ್ನು ಏರಬಲ್ಲೆನೆ ಎಂಬ ಶಂಕೆ ಮೂಡುವುದು. ಭಕ್ತರನ್ನು ತನ್ನೆಡೆಗೆ ಕರೆದೊಯ್ಯುವುದಕ್ಕೆ ಶಿವ ಮಾಡಿರುವ ಉಪಾಯ ಇದು ಎಂದು ತೋರುವುದು. ನಾವು ಅನುಭವಿಸಬೇಕಾಗುವ ಕಷ್ಟವನ್ನೆಲ್ಲ ಒಮ್ಮೆಯೇ ನಮ್ಮ ಮುಂದೆ ತೋರಿಸಿದರೆ ನಾವು ಹೌಹಾರಿ ಹೋಗುವೆವು. ಅದಕ್ಕೇ ಒಂದಾದಮೇಲೆ ಮತ್ತೊಂದನ್ನು ನಮ್ಮ ಮುಂದೆ ಇಡುವನು. ನಾವು ಹತ್ತಿಕೊಂಡು ಹೋಗುತ್ತಿದ್ದಾಗ ಪ್ರತಿ ಮೂವತ್ತು ನಲವತ್ತು ಹೆಜ್ಜೆಗೆ ಒಂದೊಂದು ಸಲ ನಿಂತು ದಣಿವಾರಿಸಿಕೊಳ್ಳುತ್ತ ಹೋಗುತ್ತಿದ್ದೆವು. ರಸ್ತೆಯ ಎಡಬಲಗಳಲ್ಲಿನ ಸುಂದರ ದೃಶ್ಯ ಚೇತೋಹಾರಿಯಾಗಿತ್ತು. ರೆಂಬೆ ಕೊಂಬೆಗಳಲ್ಲೆಲ್ಲ ಗೋಳಾಕಾರದ ಹೂವಿನ ಗೊಂಚಲಿನಿಂದ ತುಂಬಿರುವ ರೋಡೋಡೆಂಡ್ರಂ ಎಂಬ ಗಿಡವನ್ನು ನೋಡುವುದಕ್ಕೆ ಒಂದು ಆನಂದ. ಗಿಡ ಅಷ್ಟೇನೂ ದೊಡ್ಡದಲ್ಲ. ಏಳೆಂಟು ಅಡಿಯದು. ಆದರೆ ಗಿಡವೆಲ್ಲ ಹೂವಿನ ಗೊಂಚಲನ್ನು ಮುಡಿದುಕೊಂಡಂತೆ ಇವೆ. ನಿತ್ಯ ತುಂಗನಾಥನನ್ನು ನಿಂತು ಆರಾಧಿಸುವಂತೆ ಇವೆ. ಅದಲ್ಲದೆ ನೆಲದಮೇಲೆ ಬಣ್ಣಬಣ್ಣದ ಹೂಗಿಡಗಳು. ಅವುಗಳ ಆಕಾರ ಒಂದೊಂದೂ ಒಂದೊಂದು ಬಗೆಯದು. ಇಡೀ ತುಂಗಗಿರಿಯನ್ನೇ ಶಿವನೆಂದು ಭಾವಿಸಿ ಆರಾಧಿಸುವಂತೆ ಕಂಡಿತು. ಆಗಲೆ ನಾವು

ಹೋಗುತ್ತಿದ್ದಾಗ ಒಬ್ಬ ಕುರುಡ ಬೆಟ್ಟವನ್ನು ಹತ್ತಿಕೊಂಡು ಹೋಗುತ್ತಿದ್ದ. ಅವನಿಗೊಬ್ಬ ದಾರಿ ತೋರುವವನು ಮುಂದೆ ಹೋಗುತ್ತಿದ್ದ. ಆತ ಆಗಲೇ ಕೇದಾರನಾಥವನ್ನು ನೋಡಿಕೊಂಡು ಬಂದಿದ್ದ. ಆತ ಅಷ್ಟು ಬಸವಳಿದಂತೆ ಕಾಣುತ್ತಿರಲಿಲ್ಲ. ಕಡಿದು ಕಣ್ಣಿಗೆ ಕಾಣದಿದ್ದರೆ ಅಷ್ಟು ಆಯಾಸವಿಲ್ಲವೇನೋ! ಎಲ್ಲಾ ಬರುವುದು ಅದನ್ನು ನೋಡಿದಾಗ. ಪಾಪ! ಯಾವ ಪ್ರಾರ್ಥನೆಯನ್ನು ಶಿವನಡಿದಾವರೆಯಲ್ಲಿ ಸಲ್ಲಿಸುವುದಕ್ಕೆ ಹೋಗುತ್ತಿರುವನೊ, ಯಾವ ಹೃದಯದ ನೋವನ್ನು ಅವನಡಿಯಲ್ಲಿ ಇಡುವುದಕ್ಕೆ ಹೋಗುತ್ತಿರುವನೊ! ಅವನು ಜಡ ಕಣ್ಣಿನಿಂದ ಶಿವನನ್ನು ನೋಡಲಾರ. ಆದರೆ ಶಿವನನ್ನು ನೋಡಬೇಕಾಗಿಲ್ಲ, ಅವನನ್ನು ಮುಟ್ಟಬಹುದು, ಅಪ್ಪಬಹುದು. "ಕರ್ಮ ಸವೆಸಪ್ಪಾ, ಮುಂದಿನ ಜನ್ಮಕ್ಕಾದರೂ ನಿನ್ನನ್ನು ನೋಡುವ ಕಣ್ಣುಗಳನ್ನು ನೀಡಪ್ಪಾ" ಎಂದು ಬೇಡಬಹುದು. ಆತನನ್ನು ಕಂಡಾಗ ಮರುಕ ಉದಿಸಿತು. ಎಷ್ಟು ಕಷ್ಟಪಟ್ಟು ಕೊಂಡು ಯಾತ್ರೆಗೆ ಬಂದಿರುವನು ಆತ! ದೇವರವನನ್ನು ಅನುಗ್ರಹಿಸಲಿ ಎಂದು ಬೇಡಿದೆ.

ನಾವು ಹೋಗುತ್ತಿದ್ದಾಗ ಕಂಡಿಯವನು ಒಬ್ಬ ಯಾತ್ರಿಕರನ್ನು ಬುಟ್ಟಿಯಲ್ಲಿ ಕೂರಿಸಿಕೊಂಡು ಆ ಬುಟ್ಟಿಯನ್ನು ಬೆನ್ನಿಗೆ ತಗಲಿಹಾಕಿಕೊಂಡು ಹತ್ತಿ ಹೋಗುತ್ತಿದ್ದ. ಅವನು ಬೆಟ್ಟದ ಮನುಷ್ಯ, ಕಷ್ಟದಾಳು; ಆದರೂ ಮತ್ತೊಬ್ಬರನ್ನು ಹೊತ್ತುಕೊಂಡು ಹೋಗುವಾಗ ಏದುಸಿರು ಬಿಡುತ್ತಿದ್ದ. ಮಧ್ಯೆ ಮಧ್ಯೆ ನಿಂತು ಚೇತರಿಸಿಕೊಂಡು ಹೋಗುತ್ತಿದ್ದ. ಆತ ನಿಂತಾಗ ಒಳಗೆ ಕುಳಿತ ಯಾತ್ರಿಕರು, "ಹೋಗು ಹೋಗು ಎಷ್ಟು ಹೊತ್ತು ನಿಂತುಕೊಳ್ಳುವುದು" ಎಂದು ಗದರಿಸುತ್ತಿದ್ದರು. ಕೂಲಿಯಾಳು ಸ್ವಲ್ಪಹೊತ್ತು ಸಹಿಸಿ ಆಮೇಲೆ ಹೇಳಿದ "ನಾನು ಒಂದು ಯಂತ್ರ ಎಂದು ತಿಳಿದುಕೊಂಡಿರಾ? ನಾನೊಂದು ಉಸಿರಾಡುವ ಜೀವಿ" ಎಂದ. ಯಂತ್ರಕ್ಕೂ ದಣಿವಾಗುವುದು. ನಾವು ದೇವಪ್ರಯಾಗದಿಂದ ಬಸ್ಸಿನಲ್ಲಿ ಬರುತ್ತಿದ್ದಾಗ ಅದರ ಅನುಭವವಾಗಿತ್ತು. ಬಸ್ಸಿನ ರೇಡಿಯೇಟರ್ ಕಾದರೆ ಅದು ಭುಸ್ ಎಂದು ಶಬ್ದಮಾಡಿಕೊಂಡು ರೌದ್ರಾಕಾರವೇ ತಾಳುತ್ತಿತ್ತು. ಹೀಗಿರುವಾಗ ಎರಡು ಕಾಲಮೇಲೆ ನಡೆವ ನರಜಂತುವಿಗೆ ಆಯಾಸ ಎಷ್ಟಿರಬೇಕು ಎಂದುಕೊಂಡೆ.

ಈ ಕೂಲಿಯವನು ನನ್ನ ಹತ್ತಿರ ಮಾತನಾಡುತ್ತಿದ್ದಾಗ “ ತುಂಗನಾಥದ ಚಡಾಯಿ, ಕಾಬೂಲ್‍ಕ ಲಡಾಯಿ ” ಎಂದ. ನನಗೆ ಮೊದಲು ಇದು ಅರ್ಥ ವಾಗಲಿಲ್ಲ. ಕಾಬೂಲಿನ ಲಡಾಯಿಗೂ ತುಂಗನಾಥದ ಚಡಾಯಿಗೂ ಏನು ಸಂಬಂಧ, ಅದನ್ನು ಸ್ವಲ್ಪ ವಿವರಿಸು ಎಂದಾಗ ಅದರ ಭಾಷ್ಯ ಕೊಟ್ಟ. ಕಾಬೂಲಿ ನಲ್ಲಿ ಇಂಗ್ಲೀಷರು ಯುದ್ಧಮಾಡುವುದಕ್ಕೆ ಹೋದಾಗ ಬೆಟ್ಟ ಗುಡ್ಡಗಳಲ್ಲಿ ಯಾವ ಕಡೆಯಿಂದ ಪಿರಂಗಿ ಬರುವುದೋ ಎಂದು ಗೊತ್ತಾಗುತ್ತಿರಲಿಲ್ಲ. ಅದರಂತೆಯೇ ತುಂಗನಾಥದ ಚಡಾಯಿ ಹತ್ತುವಾಗ ಕಡಿದಾದ ರಸ್ತೆ ಎತ್ತಕಡೆ ಇದೆ ಎಂದು ಹೇಳುವುದು ಕಷ್ಟ ಎಂದ. ಇದೊಂದು ಕೌಶಲ್ಯದ ಟಿಪ್ಪಣಿಯೇ ಆಗಿತ್ತು. ಗೊಣ ಗಾಡುತ್ತಿದ್ದ ಯಾತ್ರಿಕರ ಭಾರವನ್ನು ಹೊತ್ತುಕೊಂಡು ಸ್ವಲ್ಪ ಹೊತ್ತಿನಲ್ಲಿ ನಮಗಿಂತ ಮುಂಚೆಯೇ ಹೊರಟುಹೋದ.

ತುಂಗನಾಥದ ಮಹಿಮೆಯನ್ನು ವಿವರಿಸುವ ಪುಸ್ತಕ ಒಂದನ್ನು ನಾನು ನೋಡುತ್ತಿದ್ದಾಗ ಅದರಲ್ಲಿ ಈ ಕತೆ ಬರುವುದು. ಒಂದೂರಿನಲ್ಲಿ ಒಬ್ಬ ಧರ್ಮಾತ್ಮ ನಿದ್ದ. ಅವನಿಗೆ ಒಬ್ಬ ಮಗ, ದುರ್ಬುದ್ಧಿಯವನು, ಮಗಳು ಶೀಲ ಸಂಪತ್ತಿಲ್ಲ ದವಳು ಇದ್ದರು. ತಂದೆಯ ಕಾಲಾನಂತರ ಮಗ ದುಡ್ಡನ್ನೆಲ್ಲಾ ದುಂದುಮಾಡಿ ಪೋಲಿಯಾಗಿ ಅನಾಚಾರಿಯಾಗಿ ಊರೂರು ಅಲೆಯುತ್ತಿರುವನು, ಮಗಳು ಜಾರೆಯಾಗಿ ಯಾವುದೋ ಊರನ್ನು ಸೇರುವಳು. ಅಣ್ಣ ಕೆಲವು ಕಾಲದ ಮೇಲೆ ತಂಗಿ ಇರುವ ಊರಿಗೆ ಬರುವನು. ಆ ಜಾರೆಯ ಮನೆಗೇ ಹೋಗುವನು. ಅವಳೇ ತನ್ನ ತಂಗಿ ಎಂದು ಗೊತ್ತಿಲ್ಲದೆ ಕೆಲವುಕಾಲ ಅವಳ ಮನೆಯಲ್ಲೆ ವಿಹರಿ ಸುತ್ತಿರುವನು. ಅವನು ಒಂದು ದಿನ ಕಾದಿನಲ್ಲಿ ಹೋಗುತ್ತಿದ್ದಾಗ ಒಂದು ಹುಲಿ ಬಂದು ಅವನನ್ನು ಕೊಲ್ಲುವುದು. ಯಮಭಟರು ಅವನ ಜೀವವನ್ನು ಯಮಲೋಕಕ್ಕೆ ಒಯ್ಯುತ್ತಿರುವರು. ಆ ಸಮಯದಲ್ಲಿ ಒಂದು ಕಾಗೆ ಆ ದೇಹದ ಒಂದು ಚೂರು ಮಾಂಸವನ್ನು ತೆಗೆದುಕೊಂಡುಹೋಗಿ ತುಂಗಾನಾಥದಲ್ಲಿ ಕೆಡವಿ ದಾಗ ಆ ಜೀವಿ ಮುಕ್ತನಾಗಿ ಕೈಲಾಸಕ್ಕೆ ಹೋಗುವನು. ಅನೈಚ್ಛಿಕವಾಗಿ ಒಂದು ಚೂರು ದೇಹದ ಭಾಗ ಅಲ್ಲಿ ಬಿದ್ದರೇನೇ ಮುಕ್ತಿ ದೊರಕುವಹಾಗಿದ್ದರೆ, ಯಾರು ಇಲ್ಲಿಗೆ ಬಂದು ಪೂಜೆ ದಾನ ಧರ್ಮ ಮಾಡುವರೋ ಅವರು ಸಕಲ ಪುರುಷಾರ್ಥಗಳನ್ನೂ ಅನುಭವಿಸುವರು ಎಂದಿದೆ. ಇವನ್ನು ಓದಿದಾಗ ನನ್ನ

ಯುಕ್ತಿ ತತ್ತರಿಸಿತು. ಮುಕ್ತಿ ನಾವಿಚ್ಛಿಸದೇ ಇದ್ದರೂ, ಎಷ್ಟು ದುರಾಚಾರಿಯಾಗಿದ್ದರೂ, ಇಲ್ಲಿಗೆ ಒಮ್ಮೆ ಬಂದರೆ ದೊರಕುವಂತೆ ಇದ್ದರೆ ಸಾಧನೆ, ಭಜನೆ, ಇವುಗಳ ಆವಶ್ಯಕವೇನು ಎನ್ನಿಸಿತು. ಈ ಕಥೆಯನ್ನು ಅಕ್ಷರಶಃ ತೆಗೆದುಕೊಳ್ಳುವುದಲ್ಲ. ದೇವರು ಎಂತಹ ದುರಾಚಾರಿಯಾಗಿರಲಿ, ಪಾಪಿಯಾಗಿರಲಿ ಅವನನ್ನು ಕೈಬಿಟ್ಟಿಲ್ಲ. ಅವನ ಉದ್ಧಾರಕ್ಕೆ ದಾರಿ ತೋರಿರುವನು. ಒಂದೇ ಜನ್ಮದಲ್ಲಿ ಮುಕ್ತಿ ಲಭಿಸದೆ ಇದ್ದರೂ ಆ ಜೀವಿ ಪಶ್ಚಾತ್ತಾಪ ಪಟ್ಟು ಕ್ರಮೇಣ ಮುಂದೆ ಬರುವ ಜನ್ಮಗಳಲ್ಲಿ ಭಕ್ತನಾಗಬಹುದು ಎಂಬುದನ್ನೂ ತೋರುವುದು. ಯಾರೂ ಭಗವಂತನ ಅಶೀರ್ವಾದಕ್ಕೆ ಬಾಹಿರರಲ್ಲ; ಪಾಪಿ ಯತಿಗಳಿಬ್ಬರೂ ಆತನ ಮಕ್ಕಳೇ. ಎಲ್ಲರ ಮೇಲೆಯೂ ಅವನ ಪ್ರೇಮ ಒಂದೇ. ಪಾಪಿಗಳು ಉದ್ಧಾರವಾಗುವುದಕ್ಕೆ ಒಂದಲ್ಲ ಒಂದು ಅವಕಾಶವನ್ನು ಭಗವಂತ ಅವರ ಜೀವನದಲ್ಲಿ ಒದಗಿಸುವನು. ಅನೇಕ ಸಾಧುಸಂತರ ಜೀವನವೇ ಇದಕ್ಕೆ ಉದಾಹರಣೆ. ನಾವು ಏತಕ್ಕೆ ಈ ದೃಷ್ಟಿಯಿಂದ ನೋಡಬಾರದು ಎನ್ನಿಸಿತು.

ಸುಮಾರು ಹತ್ತುಗಂಟೆ ಹೊತ್ತಿಗೆ ಸ್ವಲ್ಪ ದೂರದಲ್ಲಿ ತುಂಗನಾಥ ದೇವಾಲಯದ ಗೋಪುರ ಕಂಡಿತು. ಸಧ್ಯಕ್ಕೆ ಸೇರಿದೆವಲ್ಲ ಎಂದು ತುಂಗನಾಥನಿಗೆ ಜೈಕಾರ ಮಾಡುತ್ತಾ ಬಂದೆವು. ಅಲ್ಲಿ ಒಂದು ಸಣ್ಣ ಕೊಳ್ಳಕ್ಕೆ ಮೇಲಿಂದ ಗೋಮುಖದಲ್ಲಿ ನೀರು ಬೀಳುವುದು. ಅದನ್ನು ಆಕಾಶಯಾಮಿನಿತೀರ್ಥ ಎನ್ನುವರು. ಅದರಲ್ಲಿ ಮಿಂದವರಿಗೆ ಅನಂತ ಪುಣ್ಯ ಕಾದಿದೆ, ಎಷ್ಟೋ ಪಾಪ ಕ್ಷಯವಾಗುತ್ತದೆ ಎನ್ನುವರು. ಏನು ಪುಣ್ಯ ನಮಗೆ ಕಾದು ಕುಳಿತಿದೆಯೋ ಅದು ಅರಿವಾಗದೆ ಇರಬಹುದು. ಆದರೆ ಅದರಿಂದ ಸ್ವಲ್ಪ ಪಾಪವೇನೋ ಕ್ಷಯಿಸುವುದೆಂದು ನಿಸ್ಸಂದೇಹವಾಗಿ ಹೇಳಬಹುದು. ಅದರಲ್ಲಿ ಒಂದು ಮುಳುಗುಹಾಕಿ ಬಂದರೆ ಚೇತರಿಸಿಕೊಳ್ಳಬೇಕಾದರೆ ಒಂದು ಗಂಟೆ ಬಿಸಿಲು ಕಾಯಬೇಕು. ನೀರು ಅಷ್ಟು ಚಳಿ. ಈ ಪ್ರಾಯಶ್ಚಿತ್ತ ನಾವು ಮಾಡಿರುವ ಪಾಪದ ಸಾಲದಲ್ಲಿ ಯಾವುದಾದರೂ ಒಂದಂಶವನ್ನಾದರೂ ಕಳೆದೇ ಕಳೆಯುವುದು. ನಾನಂತು ಸ್ನಾನಮಾಡಲಿಲ್ಲ. ಅದರ ನೀರನ್ನು ಕೈಯಲ್ಲಿ ಕೊಂಚ ತೆಗೆದುಕೊಂಡು ತಲೆಗೆ ಪ್ರೋಕ್ಷಣೆ ಮಾಡಿಕೊಂಡೆ. ಅ ನ ಂ ತ ರ ತುಂಗನಾಥ ದೇವಾಲಯಕ್ಕೆ ಹೋದೆವು.

ಉತ್ತರಕಾಂಡದಲ್ಲೆಲ್ಲ ತುಂಗನಾಥ ಅತ್ಯಂತ ಎತ್ತರದಲ್ಲಿರುವ ಕ್ಷೇತ್ರ. ಇದು ಸಮುದ್ರಮಟ್ಟಕ್ಕೆ ೧೨೦೫೦ ಅಡಿಗಳ ಎತ್ತರದಲ್ಲಿದೆ. ಇದೊಂದು ಬಹಳ ಪುರಾತನ ದೇವಾಲಯ. ಇದೂ ಕೂಡ ಕೇದಾರ ಬದರಿಯಂತೆ ವರ್ಷಕ್ಕೆ ಆರು ತಿಂಗಳು ಮಾತ್ರ ತೆರೆದಿರುವ ದೇವಾಲಯ. ಚಳಿಗಾಲದಲ್ಲಿ ಇಲ್ಲಿಯ ಉತ್ಸವ ಮೂರ್ತಿಯನ್ನು ಉಖೀಮಠಕ್ಕೆ ತೆಗೆದುಕೊಂಡು ಹೋಗುವರು. ರಾವಣಾಸುರ ಈ ಸ್ಥಳದಲ್ಲೇ ತಪಸ್ಸು ಮಾಡಿ ಶಿವನನ್ನು ಒಲಿಸಿ ಕೊಂಡನಂತೆ. ದೇವಸ್ಥಾನ ಒಂದು ಬೆಟ್ಟದ ನೆತ್ತಿಯಮೇಲೆ ಇರುವುದು. ಅಲ್ಲಿ ನಿಂತುಕೊಂಡರೆ ಅದರ ಮುಂದೆ ಸುಮಾರು ೨೫೦ ಮೈಲಿಗಳ ಹಿಮಾಲಯ ಪಂಕ್ತಿಗಳು ಕಾಣುವುವು. ಧವಳಗಿರಿ, ತ್ರಿಶೂಲ, ನಂದಾದೇವಿ ಮುಂತಾದ ದೈತ್ಯ ಶಿಖರಗಳು ಪಂಕ್ತಿ ಪಂಕ್ತಿಯಾಗಿ ಕಾಣುವುವು. ಇಂತಹ ಅದ್ಭುತ ದೃಶ್ಯ ನಮ್ಮ ತೀರ್ಥಯಾತ್ರೆಯಲ್ಲಿ ಮತ್ತೆಲ್ಲಿಯೂ ಕಾಣುವುದಿಲ್ಲ. ದೇವಸ್ಥಾನದ ಮುಂದೆ ಕುಳಿತೆ. ಒಂದುಕಡೆ ಈ ಬೃಹತ್ ಹಿಮಾಲಯ ಪಂಕ್ತಿ ಧ್ಯಾನಮಗ್ನ ಶಿವನ ನೆನಪನ್ನು ತರುವುದು. ಮತ್ತೊಂದುಕಡೆ ಆ ಶಿವನ ಪ್ರತೀಕದಂತೆ ಇರುವ ಶಿವಲಿಂಗದೆದುರು ತಂಡತಂಡವಾಗಿ ಯಾತ್ರಿಕರು ಬಂದು "ಜೈ ತುಂಗನಾಥ್" ಎಂದು ಮಣಿದು ಭಕ್ತಿ ಭಾಷ್ಪವಾರಿಯನ್ನು ಹರಿಸುತ್ತಿರುವರು. ಶಂಕರಾಚಾರ್ಯರ ಶಿವಸ್ತೋತ್ರವನ್ನು ಮನದಲ್ಲೆ ದೇವಗುಡಿ ಎದುರಿಗೆ ಉಲಿಯತೊಡಗಿದೆ. ಗಿರಿ, ಜನ, ಮನವೆಲ್ಲ ಶಿವಾನಂದ ಲಹರಿಯಂತೆ ಗೋಚರಿಸಿತು.

## ವೇದಸಾರ ಶಿವಸ್ತುತಿ

ಪಶೂನಾಂ ಪತಿಂ ಪಾಪನಾಶಂ ಪರೇಶಂ
ಗಜೇಂದ್ರಸ್ಯ ಕೃತ್ತಿಂ ವಸನಂ ವರೇಣ್ಯಂ
ಜಟಾಜೂಟಮಧ್ಯೇ ಸ್ಫುರದಾಂಗವಾರಿಂ
ಮಹಾದೇವಮೇಕಂ ಸ್ಮರಾಮಿ ಸ್ಮರಾರಿಮ್ ||೧||

ಮಹೇಶಂ ಸುರೇಶಂ ಸುರಾರಾತಿನಾಶಂ
ವಿಭುಂ ವಿಶ್ವನಾಥಂ ವಿಭೂತ್ಯಂಗಭೂಷಂ

ವಿರೂಪಾಕ್ಷಮಿಂದ್ವರ್ಕವಹ್ನಿತ್ರಿನೇತ್ರಂ
ಸದಾನಂದಮೀಢೆ ಪ್ರಭುಂ ಪಂಚವಕ್ತ್ರಂ ||೨||

ಗಿರೀಶಂ ಗಣೇಶಂ ಗಲೇ ನೀಲವರ್ಣಂ
ಗವೇಂದ್ರಾಧಿರೂಢಂ ಗುಣಾತೀತರೂಪಂ
ಭವಂ ಭಾಸ್ವರಂ ಭಸ್ಮನಾ ಭೂಷಿತಾಂಗಂ
ಭವಾನೀ ಕಲತ್ರಂ ಭಜೆ ಪಂಚವಕ್ತ್ರಂ ||೩||

ಶಿವಕಾಂತ ಶಂಭೊ ಶಶಾಂಕಾರ್ಧಮೌಲೇ
ಮಹೇಶಾನ ಶೂಲಿನ್ ಜಟಾಜೂಟಧಾರಿನ್
ತ್ವಮೇಕೋ ಜಗದ್ವ್ಯಾಪಕೋ ವಿಶ್ವರೂಪಃ
ಪ್ರಸೀದ ಪ್ರಸೀದ ಪ್ರಭೋ ಪೂರ್ಣರೂಪ ||೪||

ಪರಾತ್ಮಾನಮೇಕಂ ಜಗದ್ಬೀಜ ಮಾದ್ಯಂ
ನಿರೀಹಂ ನಿರಾಕಾರ ಓಂಕಾರವೇದ್ಯಂ
ಯತೋ ಜಾಯತೇ ಪಾಲ್ಯತೇ ಯೇನ ವಿಶ್ವಂ
ತಮೀಶಂ ಭಜೆ ಲೀಯತೆ ಯತ್ರ ವಿಶ್ವಂ ||೫||

ನ ಭೂಮಿರ್ನಚಾಪೋ ನ ವಹ್ನಿರ್ನ ವಾಯು
ರ್ನ ಚಾಕಾಶಮಾಸ್ತೇ ನ ನಿಂದ್ರಾ
ನ ತೋಷಂ ನ ಶೀತಂ ನ ದೇಶೋ ನ ವೇಶೋ
ನ ಯಾಸ್ಯಾಸ್ತಿ ಮೂರ್ತಿಸ್ತ್ರಿಮೂರ್ತಿ ತಮೀಢೆ ||೬||

ಅಜಂ ಶಾಶ್ವತಂ ಕಾರಣಂ ಕಾರಣಾನಾಂ
ಶಿವಂ ಕೇವಲಂ ಭಾಸಕಂ ಭಾಸಕಾನಾಂ
ತುರೀಯಂ ತಮಃ ಪಾರಮಾದ್ಯಂತಹೀನಂ
ಪ್ರಪದ್ಯೆ ಪರಂ ಪಾವನಂ ದ್ವೈತಹೀನಂ ||೭||

ನಮಸ್ತೇ ನಮಸ್ತೇ ವಿಭೋ ವಿಶ್ವಮೂರ್ತೇ
ನಮಸ್ತೇ ನಮಸ್ತೇ ಚಿದಾನಂದ ಮೂರ್ತೇ
ನಮಸ್ತೇ ನಮಸ್ತೇ ತಪೋಯೋಗ ಗಮ್ಯ
ನಮಸ್ತೇ ನಮಸ್ತೇ ಶೃತಿ ಜ್ಞಾನಗಮ್ಯ ||೮||

ಪ್ರಭೋ ಶೂಲಪಾಣೇ ವಿಭೋ ವಿಶ್ವನಾಥ
ಮಹಾದೇವ ಶಂಭೋ ಮಹೇಶ ತ್ರಿನೇತ್ರ
ಶಿವಾಕಾಂತ ಶಾಂತ ಸ್ಮರಾರೆ ಪುರಾರೆ
ತ್ವದನ್ಯೋ ವರೇಣ್ಯೋ ನ ಮಾನ್ಯೋ ನ ಗಣ್ಯ ||೯||

ಶಂಭೋ ಮಹೇಶ ಕರುಣಾಮಯ ಶೂಲಪಾಣೇ
ಗೌರೀಪತೇ ಪಶುಪತೇ ಪಶುಪಾಶನಾಶಿನ್
ಕಾಶೀಪತೇ ಕರುಣಾಯಾ ಜಗದೇತದೇಕ-
ಸ್ತ್ವಂ ಹಂಸಿ ಪಾಸಿ ವಿದಧಾಸಿ ಮಹೇಶ್ವರೋಸಿ ||೧೦||

ತ್ವತ್ತೋ ಜಗದ್ಭವತಿ ದೇವ ಭವ ಸ್ಮರಾರೇ
ತ್ವಯ್ಯೇನ ತಿಷ್ಠತಿ ಜಗನ್ಮೃಡ ವಿಶ್ವನಾಥ
ತ್ವಯ್ಯೇವ ಗಚ್ಛತಿ ಲಯಂ ಜಗದೇತದೀಶ
ಲಿಂಗಾತ್ಮಕೇ ಹರ ಚರಾಚರ ವಿಶ್ವರೂಪಿನ್ ||೧೧||

ಪಶುಪತಿಯಾದ, ಪಾಪನಾಶಕನಾದ, ಪರೇಶನಾದ, ಗಜಚರ್ಮಾಂಬರವನ್ನು ಧರಿಸಿ ಶೋಭಿಸುತ್ತಿರುವ, ಜಟಾಜೂಟಮಧ್ಯೆ ಗಂಗಾವಾರಿ ಹರಿಯುತ್ತಿರುವ, ಶಿವನನ್ನು ನಾನು ಸ್ಮರಿಸುತ್ತೇನೆ.

ಮಹೇಶನೂ, ಸುರೇಶನೂ, ಸುರರ ಆರಾತಿನಾಶಕನೂ, ವಿಭುವಾದವನೂ, ವಿಶ್ವನಾಥನೂ, ವಿಭೂತಿ ಭೂಷಿತಾಂಗನೂ, ಅಗ್ನಿ ಸೂರ್ಯ ಚಂದ್ರರೆಂಬ ತ್ರಿನಯನ ಉಳ್ಳವನೂ ಸದಾನಂದನೂ ಆದ ಪಂಚವಕ್ತ್ರನನ್ನು ನಾನು ಆರಾಧಿಸುತ್ತೇನೆ. ||೨||

ಗಿರೀಶನೂ, ಗಣೇಶನೂ, ನೀಲಕಂಠನೂ, ವೃಷಭಾರೂಢನೂ, ಗುಣಾತೀತನೂ, ಭವಾನಿಯ ಪತಿಯೂ ಆದ ಪಂಚವಕ್ತ್ರನಿಗೆ ನಮಿಸುತ್ತೇನೆ ||೩||

ಎಲ್ಲ ಮಂಗಳಕ್ಕೆ ಒಡೆಯನಾದ ಶಶಾಂಕಾಢ್ಯಮೌಳೀ, ಮಹೇಶನೇ ಶೂಲಹಸ್ತನೇ, ಜಟಾಜೂಟಧಾರಿಯೇ, ನೀನೊಬ್ಬನೇ ಜಗತ್ತನ್ನೆಲ್ಲ ವ್ಯಾಪಿಸಿರುವೆ. ವಿಶ್ವರೂಪನೆ, ಹೇ ಪೂರ್ಣರೂಪನೇ ಕರುಣೆದೋರು. ||೪||

ಪರಮಾತ್ಮನೂ, ಏಕನೂ, ಜಗದ್ಬೀಜನೂ, ಆದಿಯೂ, ನಿಷ್ಕ್ರಿಯನೂ, ಓಂಕಾರವೇದ್ಯನೂ, ಭಗತ್ತಿನ ಉತ್ಪತ್ತಿ ಸ್ಥಿತಿಲಯಕಾರಿಯೂ ಆದ ಪರಶಿವನನ್ನು ನಾನು ಆರಾಧಿಸುತ್ತೇನೆ. ||೫||

ವಿಷ್ಣು ಬ್ರಹ್ಮ ರುದ್ರ ತ್ರಿಮೂರ್ತಿಸ್ವರೂಪನಾದ, ಆಕಾರಕ್ಕೆ ನಿಲುಕದ, ಪಂಚಭೂತಗಳಲ್ಲದ, ಆಯಾಸವಿಲ್ಲದ, ನಿದ್ರೆಯಿಲ್ಲದ, ಶೀತೋಷ್ಣಗಳನ್ನು ಮೀರಿದ, ದೇಶ ವೇಷಗಳಿಲ್ಲದ ಶಿವನನ್ನು ಆರಾಧಿಸುತ್ತೇನೆ. ||೬||

ಅಜನಾಗಿ, ಶಾಶ್ವತನಾಗಿ, ಕಾರಣಕ್ಕೆ ಕಾರಣನಾಗಿ, ಜ್ಯೋತಿಗೆ ಜ್ಯೋತಿಯನ್ನು ನೀಡುವ ಶುಭವಾಗಿ, ನಿನಗೆ ಎರಡಿಲ್ಲದ ತಮಾತೀತವಾದ ತುರೀಯದಲ್ಲಿರುವ, ಆದಿ ಅಂತ್ಯ ರಹಿತನಾದ ಶಿವನಲ್ಲಿ ನಾನು ಶರಣಾಗುವೆನು. ||೭||

ವಿಭುವಾದ ವಿಶ್ವಮೂರ್ತಿಯೆ ನಿನಗೆ ನಮಸ್ಕಾರ; ಚಿದಾನಂದ ರೂಪಿಯೆ ನಿನಗೆ ನಮಸ್ಕಾರ; ತಪಸ್ಸು ಯೋಗಕ್ಕೆ ನಿಲುಕುವವನೆ ನಿನಗೆ ನಮಸ್ಕಾರ; ಶೃತಿಜ್ಞಾನದ ಮೂಲಕ ಅರಿಯಬಲ್ಲವನೆ ನಿನಗೆ ನಮಸ್ಕಾರ ||೮||

ಹೇ ಪ್ರಭು, ಶೂಲಪಾಣಿ, ವಿಭು, ವಿಶ್ವನಾಥ, ಮಹಾದೇವ, ಶಂಭೋ ಮಹೇಶ, ತ್ರಿನೇತ್ರ, ಪಾರ್ವತೀವಲ್ಲಭ, ಶಾಂತಮೂರ್ತಿ, ಮನ್ಮಥಾರಿ, ತ್ರಿಪುರದಹನ, ಪ್ರಪಂಚದಲ್ಲಿ ಆರಾಧಿಸುವುದಕ್ಕೆ ಗೌರವ ತೋರುವುದಕ್ಕೆ ನಿನ್ನ ಹೊರತು ಅನ್ಯರಿಲ್ಲ. ||೯||

ಹೇ ಶಂಭೋ, ಮಹೇಶ, ಕರುಣಾಮಯ, ಶೂಲಪಾಣಿ, ಗೌರೀಪತೆ ಪಶುಪತೆ, ಜೀವಿಗಳ ಕರ್ಮವಿಮೋಚನೆಕ, ಕಾಶೀಪತೆ, ನೀನೇ ಕರುಣೆಯಿಂದ, ವಿಶ್ವವನ್ನು ಸೃಜಿಸುವೆ, ಪಾಲಿಸುವೆ, ನಾಶಮಾಡುವೆ. ||೧೦||

ಹೇ ಮನ್ಮಥಾರಿ, ನಿನ್ನಿಂದ ವಿಶ್ವ ಜನಿಸಿದೆ. ಹೇ ವಿಶ್ವನಾಥ, ನಿನ್ನಲ್ಲಿ ವಿಶ್ವ ಚಲಿಸುತ್ತದೆ. ಹೇ ಜಗದೀಶ, ಲಿಂಗಾತ್ಮನಾದ ನಿನ್ನಲ್ಲಿ ಕೊನೆಗೆ ವಿಶ್ವವೆಲ್ಲ ಐಕ್ಯವಾಗುವುದು. ಚರಾಚರ ವಿಶ್ವರೂಪಿಯು ನೀನೆ. ||೧೦||

೧೪

# ಗೋಪೇಶ್ವರ

ಸ್ವಲ್ಪ ಹೊತ್ತು ದೇವಸ್ಥಾನದ ಮುಂದೆಯೇ ತುಳಿತಿದ್ದೆವು. ಹನ್ನೆರಡು ಗಂಟೆ ಉರಿಬಿಸಿಲಾದರೂ ತಂಪಾಗಿತ್ತು, ಅಷ್ಟು ಎತ್ತರವಾಗಿದ್ದುದರಿಂದ. ಅಲ್ಲಿರುವ ಅಂಗಡಿಯಲ್ಲಿ ಸ್ವಲ್ಪ ತಿಂಡಿ ತಿಂದು ಸುಮಾರು ೧೨ ಗಂಟೆ ಹೊತ್ತಿಗೆ ಅಲ್ಲಿಂದ ಹೊರಟೆವು. ಬೇರೆ ದಾರಿಯಿಂದ ಇಳಿದು ಚಮೋಲಿಗೆ ಹೋಗುವ ದಾರಿಯನ್ನು ಸೇರಬೇಕು. ಅಲ್ಲಿಂದ ಮೂರುಮೈಲಿ ಒಂದೇ ಸಮನಾಗಿ ಇಳಿಯ ಬೇಕು. ಆ ಮೂರು ಮೈಲಿಯಲ್ಲಿ ನಾವು ಸುಮಾರು ನಾಲ್ಕುಸಾವಿರ ಅಡಿ ಇಳಿಯಬೇಕು. ಹೋಗುವಾಗ ಆದಂತೆ ದಣಿವಾಗದೇ ಇದ್ದರೂ ಈಗ ಬೇರೊಂದು ಕಷ್ಟಕ್ಕೆ ಒಳಗಾದೆವು. ಇಳಿಜಾರು, ಯಾವಾಗಲೂ ನಮ್ಮನ್ನು ಮುಂದು ಮುಂದಕ್ಕೆ ತಳ್ಳುತ್ತಲೇ ಇತ್ತು. ವೇಗವನ್ನು ತಡೆಯುವುದೇ ಕಷ್ಟ ವಾಯಿತು. ಕಾಲಿನ ಮೀನುಖಂಡಗಳೆಲ್ಲ ನೋಯತೊಡಗಿತು. ಮೂರು ಮೈಲಿ ಬಂದಮೇಲೆ ಭೀಮುಚೆಟ್ಟಿ ಎಂಬ ಗ್ರಾಮುಸಿಕ್ಕುವುದು. ಅಲ್ಲಿ ಮರದ ಕೆಳಗೆ ಸ್ವಲ್ಪ ಹೊತ್ತು ತಂಗಿದ್ದು ಅನಂತರ ಪುನಃ ಹೊರಟೆವು. ಇಲ್ಲಿಂದ ಸುಮಾರು ಎರಡು ಮೈಲಿ ಸಮತಟ್ಟಿನ ರಸ್ತೆ. ಅನಂತರ ಐದು ಮೈಲಿ ಒಂದೇ ಸಮನಾಗಿ ಇಳಿದು ಹೋಗಬೇಕು. ದಟ್ಟವಾದ ಕಾಡು, ಸೂರ್ಯರಶ್ಮಿಕೂಡ ಒಳಗೆ ಬರುವಂತೆ ಇಲ್ಲ. ಮಿಡಿತೆಗಳ ಝೇಂಕಾರ ಭಯಾನಕವಾಗಿತ್ತು. ನಾವು ಹೋಗುತ್ತಿರುವವರು ಕೂಡ ಆರುಮಂದಿ. ಮುಂದೆ ಯಾವ ಯಾತ್ರಿಕರನ್ನೂ ಕಾಣಲಿಲ್ಲ. ಹಿಂದೆ ಯಾವ ಯಾತ್ರಿಕರು ಬರುತ್ತಿದ್ದರೋ ಗೊತ್ತಿಲ್ಲ. ಇಂದು ಬಹಳ ಸಾಕಾಗಿತ್ತು.

ಬೆಳಿಗ್ಗೆ ತುಂಗನಾಥಕ್ಕೆ ಹತ್ತಿ ಹೋದಾಗಲೇ ಆತನ ಸನ್ನಿಧಿಯನ್ನು ಸೇರುವ ಹೊತ್ತಿಗೇ ಸಾಕಾಯಿತು. ಈಗ ಎಷ್ಟು ಮುಂದೆ ಮುಂದೆ ಹೋದರೂ ಸೇರುವ ಗುರಿ ಕಾಣುವಂತೆಯೇ ಇರಲಿಲ್ಲ. ನಮ್ಮ ಕಾಲುಗಳು ಕೂಡ ಆ ದಿನದ ಕೋಟ (Ouota)ಪೂರೈಸಿದ್ದವು. ಇನ್ನು ನಡೆಯಲಾರೆ ಎಂದು ಹೇಳುವಂತೆ ಇತ್ತು. ನನ್ನ ಜೊತೆಯಲ್ಲಿ ಬಂದಿರುವವರಂತೂ ಸಾಕಾಗಿ "ಸ್ವಾಮಿಜಿ ನಾಲ್ಕು ಮೈಲಿ ನಮ್ಮ ನಾಲ್ಕು ಮೈಲಿಯಲ್ಲ, ನಮ್ಮ ಎರಡು ಮೈಲಿಗೆ ಅವರ ಒಂದು ಮೈಲಿ ಲೆಕ್ಕಾಚಾರ" ಎಂದು ಗೊಣಗಾಡುತ್ತಿದ್ದರು. ಮೈಲಿಕಲ್ಲಿನಿಂದ ಮೈಲಿಕಲ್ಲಿಗೆ ಅಂತರ ಇಂಡಿಯಾ ರಬ್ಬರಿನಂತೆ ಹಿಗ್ಗಲಿಸಿದಂತೆ ಆಯಿತು. ಐನ್‌ಸ್ಟಿನ್ ವಿಜ್ಞಾನಿಯ ಸಾಂಬಂಧಿಕಸಿದ್ಧಾಂತವನ್ನು Relativity ಇಲ್ಲೂ ತರಬೇಕಾಗು ವುದು. ಒಂದು ಮೈಲಿ ಎರಡು ಮೈಲಿ ಎಂದು ಹೇಳುವಾಗ ಅದನ್ನು ನಡೆಯು ವವನ ಸ್ಥಿತಿಯನ್ನು ತೆಗೆದುಕೊಳ್ಳಬೇಕು. ಸೋತಿದ್ದರೆ ಒಂದು ಮೈಲಿ ಎರಡು ಮೈಲಿಯಾಗುವುದು. ಆತನ ಜೀವನದಲ್ಲಿ ಒಂದು ಘಟನೆ ಬರುವುದು. ಒಬ್ಬ ಸ್ತ್ರೀ, ಆಕೆ ದೊಡ್ಡ ಗಣಿತಶಾಸ್ತ್ರಜ್ಞಳಲ್ಲ, ಸಾಂಬಂಧಿಕ ಸಿದ್ಧಾಂತವನ್ನು ತಿಳಿದು ಕೊಳ್ಳಬೇಕೆಂದು ಐನ್‌ಸ್ಟಿನ್ ಹತ್ತಿರ ಬಂದು "ನನಗೆ ಅದನ್ನು ಒಂದೇ ಮಾತಿ ನಲ್ಲಿ ಮುಂದಟ್ಟುಮಾಡಿ" ಎಂದಳು. ಐನ್‌ಸ್ಟಿನ್ ಹೇಳಿದ: "ನೋಡು, ನೀನು ಪ್ರೀತಿಗೆ ಪಾತ್ರನಾದವನೊಡನೆ ಮಾತನಾಡುತ್ತಾ ಕುಳಿತುಕೊಂಡರೆ ಗಂಟೆಗಳು ನಿಮಿಷದಂತೆ ಕಳೆದು ಹೋಗುವುದು. ಆದರೆ ನಿನಗೆ ಬೇಡವಿಲ್ಲದವರೊಡನೆ ಬೆರೆತಾಗ, ನಿಮಿಷ ಗಂಟೆಯಂತೆ ಆಗುವುದು." ನಾವು ಕಾಲ ದೇಶವನ್ನು ಅಳೆಯುವಾಗ ಅಳೆಯುವವನು ಯಾರು, ಎಲ್ಲಿರುವನು, ಎಂಬುದನ್ನು ಗಮನಿಸ ಬೇಕು.

ನಡೆನಡೆದು ಸಾಕಾಗಿ ಸ್ವಲ್ಪ ಕುಳಿತರೆ ಸಾಕು ಆ ಕಾಡಿನಲ್ಲಿರುವ ಒಂದು ಬಗೆಯ ನೊಣ ಬಂದು ನಮ್ಮ ಕೈಕಾಲನ್ನೆಲ್ಲಾ ಕಚ್ಚುವುದು. ಕಚ್ಚಿದ ತಕ್ಷಣ ಆ ಸ್ಥಳದಲ್ಲಿ ರಕ್ತ ಹನಿಗೂಡುವುದು. ಗಂದೆಯಾಗುವುದು, ನವೆಯಾಗುವುದು. ಆ ಕಾಡಿನಲ್ಲಿ ಹುಲಿ ಕರಡಿಗೆ ಅಂಜಬೇಕಾಗಿರಲಿಲ್ಲ. ಆ ಸಣ್ಣ ನೊಣಕ್ಕೆ ನಾವು ಅಷ್ಟೊಂದು ಅಂಜಬೇಕಾಗಿತ್ತು. ಎಲ್ಲಿಯೂ ಕುಳಿತುಕೊಳ್ಳದೆಯೇ ಮುಂದೆ ನಡೆದು ಹೋಗಬೇಕಾಯಿತು. ಆಗ ಹೋಗುತ್ತಿರುವಾಗಲೇ ಒಂದು ಎಮ್ಮೆ

ಅಲ್ಲಿ ಮೇಯುತ್ತಿರುವುದನ್ನು ನೋಡಿದೆ. ಅದರ ಮೈಯ್ಯನ್ನೆಲ್ಲ ನೊಣಗಳು ಮುತ್ತಿದ್ದವು. ಆ ಸಾಧು ಪ್ರಾಣಿಯೋ "ಬೇಕಾದರೆ ಉಳಿದ ನಿನ್ನ ನೊಣದ ಬಳಗವನ್ನೆಲ್ಲ ಕರೆದುಕೊಂಡು ಬಾ ಚಿಂತೆಯಿಲ್ಲ" ಎಂದು ಹೇಳುವಂತೆ ಆ ನೊಣಗಳನ್ನು ಗಮನಿಸದೇ ಮೇಯುತ್ತಿತ್ತು. ಸುಮಾರು ಆರೂವರೆ ಗಂಟೆ ಹೊತ್ತಿಗೆ ಮಂಡಲ್ ಎಂಬ ಗ್ರಾಮವನ್ನು ಸೇರಿದೆವು. ಅಲ್ಲಿ ಧರ್ಮಶಾಲೆಯಲ್ಲಿ ತಂಗಿದೆವು. ಅಂಗಡಿಯವನೊಬ್ಬನು ಹಿತ್ತಲಲ್ಲಿ ಮೂಲಂಗಿ ಬೆಳೆದಿದ್ದ. ಅವನ್ನು ಕ್ರಯಕ್ಕೆ ಕೊಡುತ್ತೀಯ ಎಂದು ಕೇಳಿದಾಗ "ಬೇಕಾದರೆ ಕಿತ್ತುಕೊಂಡು ಬನ್ನಿ, ತೂಕಮಾಡಿ ಕೊಡುತ್ತೇನೆ" ಎಂದ. ಅವನ ತೋಟಕ್ಕೆ ಹೋಗಿ ಸುಮಾರು ಹದಿನಾರು ಮೂಲಂಗಿಯಷ್ಟನ್ನು ತಂದೆವು. ಅವನು ಸೊಪ್ಪು ಸಹಿತ ತೂಕಾಮಾಡಿಕೊಟ್ಟ. ಅದಕ್ಕೆ ಸುಮಾರು ಹತ್ತು ಆಣೆ ಆಯಿತು. ದುಡ್ಡು ಎಷ್ಟಾದರೂ ಚಿಂತೆಯಿಲ್ಲ ಎಂದು ತೆಗೆದು ಕೊಂಡೆವು. ಬಾಯಿ ಕೆಟ್ಟುಹೋಗಿತ್ತು. ಹುಳಿಯನ್ನಾದರೂ ಮಾಡಿ ತೆಗೆದು ಕೊಳ್ಳೋಣ ಎನ್ನಿಸಿತು. ಆ ಮೂಲಂಗಿ ಸೊಪ್ಪನ್ನೆಲ್ಲ ಅಂಗಡಿಯವನೆದುರಿಗೇ ಕಿತ್ತು ಆಚೆಗೆ ಎಸೆದೆವು. ಸ್ವಲ್ಪಹೊತ್ತಿನ ಮೇಲೆ ಉಳಿದ ಯಾತ್ರಿಕರು ಆ ಸೊಪ್ಪನ್ನೇ ಪಲ್ಯಮಾಡುವುದಕ್ಕೆ ತೆಗೆದುಕೊಂಡು ಹೋದರು. ಅಂಗಡಿಯವನು ಇದನ್ನು ನೋಡಿದ. ಪರವಾಯಿಲ್ಲ, ಸೊಪ್ಪಿಗೂ ಬೆಲೆ ಇದೆ ಎಂದು ತಿಳಿದ. ಅನಂತರ ಬೇರೆ ಗಿರಾಕಿಗಳು ಮೂಲಂಗಿ ತೆಗೆದುಕೊಳ್ಳುವುದಕ್ಕೆ ಬಂದಾಗ ಮೂಲಂಗಿ ಪಾವಿಗೆ ಅಂದರೆ ೨೦ ತೊಲಕ್ಕೆ ಎಂಟು ಆಣೆ, ಅದರ ಸೊಪ್ಪು ಎರಡು ಆಣೆ ಎಂದು ಎರಡನ್ನೂ ಪ್ರತ್ಯೇಕವಾಗಿ ಮಾರತೊಡಗಿದ.

ನಾವು ಧರ್ಮಶಾಲೆಯಲ್ಲಿದ್ದಾಗ ೨೦–೨೫ ಜನ ಬಂಗಾಳಿ ಗುಂಪೊಂದು ಬಂದಿತು. ಅದರಲ್ಲಿ ಒಬ್ಬ ಮುಂದಾಳು ಹಿರಿಯ ಹೆಂಗಸು. ಆಕೆ ನನ್ನನ್ನು ಎರಡು ದಿನದ ಹಿಂದೆ ಉಖೀಮಠದಲ್ಲಿ ನೋಡಿದಾಗ ಬಂಗಾಳಿಯಲ್ಲಿ ಮಾತ ನಾಡಿಸಿದಳು. ನಾನು ಸ್ವಲ್ಪ ಹರಕು ಮುರಕು ಬಂಗಾಳಿಯಲ್ಲೆ ಉತ್ತರಕೊಟ್ಟು ನನಗೆ ಬಂಗಾಳಿ ಬರುವುದಿಲ್ಲ ಎಂದು ಬಂಗಾಳಿ ಭಾಷೆಯಲ್ಲೇ ಹೇಳಿದೆ. "ಬಂಗಾಳಿಯಲ್ಲೇ ಬಂಗಾಳಿ ಬರೋದಿಲ್ಲ ಎಂದು ಹೇಳಬೇಕಾದರೆ ನಿಮಗೆ ಬಂದೇ ಬರುತ್ತದೆ. ನಿಮ್ಮ ಮುಖ ನೋಡಿದರೆ ನೀವು ಥೇಟ್ ಬಂಗಾಳಿಗಳ

ಹಾಗೆಯೇ ಕಾಣುತ್ತೀರಿ " ಎಂದು ತನ್ನ ಪಯಣದ ಸುಖದುಃಖವನ್ನು ಹೇಳಿ ಕೊಂಡಳು. ಇಲ್ಲಿ ಮಂಡಲ್ ಚೆಟ್ಟಿಯಲ್ಲಿ ನಮ್ಮ ಹಿಂದೆಯೇ ಆಕೆ, ಮತ್ತು ಆಕೆಯ ಪರಿವಾರದವರೆಲ್ಲ ಬಂದರು. ಹಿರಿಯಾಕೆ, ಬಂದೊಡನೆಯೆ ಅಡಿಗೆ ಮನೆಗೆ ನುಗ್ಗಿ ಅಡಿಗೆಗೆ ಆರಂಭಿಸಿದಳು. ಅಲ್ಲಿ ಅಡಿಗೆ ಮನೆ ಇರುವುದು ಒಂದು. ಅದರಲ್ಲಿ ಎಂಟು ಹತ್ತು ಒಲೆಗಳಿವೆ. ಇಳಿದುಕೊಳ್ಳುವವರೆಲ್ಲ ಒಂದೇ ಕಡೆ ಅಡಿಗೆ ಮಾಡಿಕೊಳ್ಳುವುದಕ್ಕೆ ಬರುತ್ತಾರೆ. ಏಳೆಂಟು ಒಲೆಗಳು ಏಕಕಾಲದಲ್ಲಿ ಉರಿಯುತ್ತಿರುವಾಗ ಸರಿಯಾಗಿ ಹೊಗೆ ಹೋಗುವುದಕ್ಕೂ ಅವಕಾಶವಿರುವುದಿಲ್ಲ. ಒಳಗೆ ಕಣ್ಣಿಗೆ ಹೊಗೆ, ಜೊತೆಗೆ ಸೆಕೆಗೆ ಬೆವರು ಬೇರೆ. ಸ್ವಲ್ಪಹೊತ್ತು ಕುಳಿತು ಕೊಳ್ಳುವುದರೊಳಗೆ ಸಾಕಾಗುವುದು. ಆ ಹೆಂಗಸು ಅಡಿಗೆ ಮಾಡಿಟ್ಟು ಸಾಕಾಗಿ ಹೊರಗೆ ಬಂದು ನಿಂತಳು. ನಾನು ಅಲ್ಲೇ ತಾರಾಡುತ್ತಿದ್ದೆ. " ಅಡಿಗೆ ಆಯಿತೆ ? ಏನೇನು ಮಾಡಿರುವಿರಿ " ಎಂದೆ. ಆಕೆ " ಪಲ್ಯ ಬೇಳೆ ಅನ್ನ ಮಾಡಿದ್ದೇನೆ, ಸಾಕಾಯ್ತು ಒಲೆಮುಂದೆ ಕುಳಿತುಕೊಂಡು " ಎಂದಳು. " ನೀವು ಊಟ ಇಲ್ಲೇ ಮಾಡುತ್ತೀರ " ಎಂದು ಕೇಳಿದಳು. " ಇಲ್ಲ ನಮ್ಮ ಕಡೆಯವರು ಬೇರೆ ಅಡಿಗೆ ಮಾಡಿರುವರು " ಎಂದೆ. ಆಕೆ ಸ್ವಭಾವ ನೋಡಿ ನನಗೆ ಸಂತೋಷ ವಾಯಿತು. ಎಲ್ಲರಂತೆ ತಾನೂ ಕೂಡ ಬೆಳಿಗ್ಗೆ ಬನಿಯಕುಂಡದಿಂದ ಹೊರಟು ತುಂಗಾನಾಥಕ್ಕೆ ಏರಿ ಸಾಕಾಗಿ ಸೊರಗಿ ಬಂದಿರುವಳು. ಜೊತೆಯವರೆಲ್ಲ ಕಾಲು ಚಾಚಿಕೊಂಡು ಸುಧಾರಿಸಿಕೊಳ್ಳುತ್ತಿರುವಾಗ ತಾನು ಮುಂಚೆ ಎದ್ದು ಎಲ್ಲರಿಗೂ ಅಡಿಗೆ ಮಾಡಿಟ್ಟು ಅವರಿಗೆಲ್ಲ ಊಟಕ್ಕೆ ಏಳಿ ಎನ್ನಬೇಕಾದರೆ ಅವರು ಸಾಧಾರಣ ಹೆಂಗಸಲ್ಲ ಎಂದುಕೊಂಡೆ.

೨೨ ನೇ ತಾರೀಖು ಶನಿವಾರ ನಾಲ್ಕು ಗಂಟೆಗೆ ಮಂಡಲ ಬಿಟ್ಟು ಚಮೋಲಿ ಕಡೆ ಹೊರಟೆವು. ಎರಡು ಮೈಲಿ ಒಂದೇ ಸಮನಾಗಿ ನಡೆದ ಮೇಲೆ ಒಂದು ಮೈಲಿ ಕೆಳಗೆ ಇಳಿದು ನದಿಯೊಂದನ್ನು ದಾಟಿ ಪುನಃ ಒಂದು ಮೈಲಿಯನ್ನು ಹತ್ತಬೇಕು. ಗೋಪೇಶ್ವರದಲ್ಲಿ ಒಂದು ಬಹಳ ಪುರಾತನ ಶಿವನ ಗುಡಿ ಇದೆ. ರುದ್ರನಾಥ ಎಂಬ ಪಂಚಮ ಶಿವಗಳಲ್ಲಿ ಒಂದಾದ ಶಿವದೇವಾಲಯದ ಚಳಿಗಾಲದ ಪೂಜಾಮಂದಿರ ಇದು. ರುದ್ರನಾಥನ ಸಿಂಹಾಸನ ಈಗ ಖಾಲಿಯಾಗಿದೆ. ಆ ಉತ್ಸವ ಮೂರ್ತಿ ತನ್ನ ಸ್ವಸ್ಥಾನಕ್ಕೆ ತೆರಳಿರುವನು. ಅದನ್ನೆಲ್ಲ ನೋಡಿ

ಕೊಂಡು ಹೋಗುವ ಹೊತ್ತಿಗೆ ಸರಿಯಾಗಿ ಮಳೆ ಬಂತು. ಮಳೆ ಏನೂ ಅಷ್ಟು ಜೋರಾಗಿರಲಿಲ್ಲ. ಆದರೂ ನಮ್ಮ ಕೂಲಿಗಳು ಅದರಲ್ಲಿ ಹೋಗಲು ಹಿಂದೆಗೆದರು. ನಾವು ಇನ್ನು ನಾಲ್ಕು ಮೈಲಿ ನಡೆದು ಚಮೋಲಿ ಸೇರಿದ್ದರೆ ಅಲ್ಲಿಂದ ಬದರಿಗೆ ಹೋಗುವ ರೋಡಿನಲ್ಲಿರುವ ಪೀಪಲ್‌ಕೋಟಿ ಎಂಬಲ್ಲಿಗೆ ಮೂರನೆ ದಿನ ಬೆಳಿಗ್ಗೆ ಬಸ್ಸಿನಲ್ಲಿ ಹೋಗಬಹುದಾಗಿತ್ತು. ಕೂಲಿಗಳು ತಮಗೆ ಇರುವುದು ಮೈಮೇಲಿರುವ ಬಟ್ಟೆಯೊಂದೆ; ಅದು ನೆನೆದುಹೋದರೆ ತಾವು ರಾತ್ರೆಯೆಲ್ಲ ಚಳಿಯಲ್ಲಿ ನಡುಗಬೇಕಾಗುವುದು ಎಂದರು. ನಮ್ಮ ಜೊತೆಯಲ್ಲಿ ಬಂದವರೂ ಕೂಡ ತುಂಗನಾಥದಿಂದ ಬಂದು ಸಾಕಾದಷ್ಟು ಸುಧಾರಿಸಿಕೊಂಡಿರಲಿಲ್ಲ. ಸಧ್ಯಕ್ಕೆ ಅಲ್ಲೇ ತಂಗೋಣ ಎಂದು ಕೂಲಿಯವರ ಪರವಾಗಿ ಸಹಾನುಭೂತಿಯಿಂದ ಮಾತನಾಡಿದರು. ಅಂತೂ ಅಲ್ಲೆ ತಂಗಬೇಕಾಯಿತು. ಆ ದೇವಸ್ಥಾನದ ಒಳಗಡೆ ಒಂದು ಪ್ರಾಂಗಣದಲ್ಲಿ ಇಳಿದುಕೊಂಡೆವು. ನಾವು ಅಲ್ಲಿ ತಂಗಿದ್ದಾಗ ನಮ್ಮ ನಮ್ಮೊಳಗೆ ಮಾತನಾಡಿಕೊಳ್ಳುತ್ತಿರುವ ದಾಕ್ಷಿಣಾತ್ಯರ ಮಾತನ್ನು ಕೇಳಿ ಆ ದೇವಸ್ಥಾನದ ಟ್ರಸ್ಟಿಗಳು ಬಂದು ನಮ್ಮನ್ನು ಮಾತನಾಡಿಸಿದರು. ಅವರು ಮೈಸೂರು ದೇಶದ ಶೃಂಗೇರಿ ಮಠದಲ್ಲಿ ಕೆಲವು ಕಾಲ ಕೆಲಸ ಮಾಡಿದ್ದರು. ರಿಟೈರ್ ಆದಮೇಲೆ ಇಲ್ಲಿ ಕೆಲಸಕ್ಕೆ ಬಂದಿದ್ದರು. ಒಬ್ಬರೇ, ಸಂಸಾರದವರು ಕೂಡ ಯಾರೂ ಇರಲಿಲ್ಲ. ಅವರು ನಮಗೆ ಬೇಕಾದ ಸೌಕರ್ಯಗಳನ್ನೆಲ್ಲ ಒದಗಿಸಿ ಕೊಟ್ಟರು. ನಾವು ತಂಗಿದ್ದ ಕೋಣೆಯ ಮೇಲೆ ಸಂಜೆ ಯಾರೋ ಸಾಧುಗಳೊಬ್ಬರು ಬಂದು ಶಿವಭಜನೆ ಮಾಡಿದ ಮೇಲೆ ಭಕ್ತಿಯ ವಿಷಯವಾಗಿ ಮಾತನಾಡಿದರು. ಹಳ್ಳಿಯ ಕೆಲವು ಜನ ಕೇಳಲು ಬಂದಿದ್ದರು. ಗೋಪೇಶ್ವರ ಸನ್ನಿಧಿಯಲ್ಲಿ ಅಂದು ರಾತ್ರಿ ಕಳೆದೆವು.

೧೫

# ಜೋಶೀಮಠ

೨೩ ನೇ ಭಾನುವಾರ ಬೆಳಿಗ್ಗೆ ಹೊರಟು ಮೂರು ಮೈಲಿ ದೂರದಲ್ಲಿರುವ ಚಮೋಲಿ ಸೇರಿದೆವು. ರುದ್ರಪ್ರಯಾಗದಿಂದ ಬದರಿಗೆ ಹೋಗುವ ಮಾರ್ಗವನ್ನು ಇಲ್ಲಿ ಸೇರುವೆವು. ಪಿಪ್ಪಲ್‌ಕೋಟೆಗೆ ಇಲ್ಲಿಂದ ಹತ್ತು ಮೈಲಿ. ಇಲ್ಲಿಂದ ಅಲ್ಲಿಯ ವರೆವಿಗೂ ಬಸ್ಸು ಮಾಡಿರುವರು. ಕೂಲಿಗಳಿಗೆ ಸಾಮಾನು ಹೊತ್ತು ಸಾಕಾಗಿತ್ತು. ಅವರನ್ನು ಸಾಮಾನು ಸಮೇತ ಬಸ್ಸಿನಲ್ಲಿ ಕುಳ್ಳಿರಿಸಿದೆವು. ನಾವು ಚಕ್ರದ ವಾಹನವನ್ನು ನೋಡಿಯೇ ಹಲವು ದಿನಗಳಾಗಿತ್ತು. ಹಿಮಾಲಯದಲ್ಲಿ ಸಂಚರಿಸುತ್ತಿದ್ದಾಗ ಎರಡು ಚಕ್ರದ ಬಂಡಿಗಳು ಕೂಡ ಕಾಣುತ್ತಿರಲಿಲ್ಲ. ಅಲ್ಲಿ ಗಾಡಿ ಹೋಗುವುದಕ್ಕೆ ಮಾರ್ಗವೇ ಇರಲಿಲ್ಲ. ನಾವು ಚಮೋಲಿಯಲ್ಲಿ ಬಸ್ಸನ್ನು ನೋಡಿದಾಗ ಅನಾಗರಿಕತೆಯಿಂದ ನಾಗರಿಕತೆಗೆ ಬಂದಂತೆ ಆಯಿತು.

ಬಸ್ಸು ಹೋಗುವುದಕ್ಕೆ ಇನ್ನೂ ಒಂದು ಗಂಟೆ ಕಾಲವಿತ್ತು. ಹೊರಗಡೆ ಎಲ್ಲಿಯೂ ಸರಿಯಾಗಿ ಕುಳಿತುಕೊಳ್ಳುವುದಕ್ಕೆ ಸ್ಥಳವಿಲ್ಲದುದರಿಂದ ಬಸ್ಸಿನ ಒಳಗೇ ಕುಳಿತುಕೊಂಡೆವು. ಎದುರಿಗಿದ್ದ ಹೊಟೇಲಿನಲ್ಲಿ ಬ್ಯಾಟರಿ ಸೆಟ್ಟಿನಿಂದ ಕೆಲಸ ಮಾಡುವ ರೇಡಿಯೋ ಇಟ್ಟಿದ್ದರು. ಅದು ಯಾವುದೋ ಊರಿನಿಂದ ಬರುವ ಸಂಗೀತವನ್ನು ಎಲ್ಲರಿಗೂ ನಿಷ್ಪಕ್ಷಪಾತವಾಗಿ ಹಂಚುತ್ತಿತ್ತು. ಬಸ್ಸಿನಲ್ಲಿ ಇದ್ದಾಗ ತೆಲುಗು ದೇಶದ ಕಡೆಯಿಂದ ಒಬ್ಬ ನಮ್ಮ ಮುಂದೆ ಬಂದು ನಿಂತ. ನಮ್ಮವರಲ್ಲಿ ಒಬ್ಬರಿಗೆ ತೆಲಗು ಚೆನ್ನಾಗಿ ಬರುತ್ತಿತ್ತು. ಅವರು ಅವನೊಡನೆ ಮಾತಾಡಿದ ಮೇಲೆ ಅವರನ್ನು ಬಿಟ್ಟು ಕದಲಲೇ ಇಲ್ಲ. ಬೆಲ್ಲವನ್ನು ನೊಣ

ಹೇಗೆ ಮುತ್ತುವುದೊ ಹಾಗೆ ಮುತ್ತಿದ. ಬಸ್ಸಿನ ಹೊರಗಡೆ ನಿಂತು ಏನೇನೋ ಮಾತನಾಡುತ್ತಿದ್ದ. ಅವನು ಮಾತನಾಡುವ ವಿಧಾನವನ್ನು ನೋಡಿದರೆ ಹುಚ್ಚ ನೆಂದು ಕಾಣುತ್ತಿತ್ತು. ಗೀತೆಯಿಂದ ಶ್ಲೋಕವನ್ನು ಒಮ್ಮೆ ಹೇಳುವನು. ವೇದ ಮಂತ್ರವನ್ನೊಮ್ಮೆ ಹೇಳುವನು. ತಕ್ಷಣವೇ ಯಾವುದೋ ಸಿನಿಮಾ ಹಾಡನ್ನು ಹೇಳುವನು. ಒಂದುಸಲ ಸರ್ಕಸ್ಸಿನಲ್ಲಿರುವ ಬಫೂನಿನಂತೆ ಮಾತನಾಡುವನು. ಯಾವುದಾದರೂ ಬಸ್ಸು ಹೋಗುತ್ತಿದ್ದರೆ ಸುಖವಾಗಿ ಹೋಗಿ ಎಂದು ಹರಸು ವನು. ಅವನು ಒಂದುಗಂಟೆ ಲೀಲಾಜಾಲವಾಗಿ ಕಳೆಯುವಂತೆ ಮಾಡಿದ. ಅವನಿಗೆ ಎಷ್ಟೋ ಕೃತಜ್ಞರಾದೆವು. ಆದರೆ ಅದರ ಹಿಂದೆ ನಾನು ಪಾಪ ಆ ಜೀವಿಗೆ ಮರುಗುತ್ತಿದ್ದೆ. ಸ್ವಲ್ಪ ವ್ಯತ್ಯಾಸವಾದರೆ ಮನುಷ್ಯ ಎಷ್ಟು ಅಪಹಾಸ್ಯಕ್ಕೆ ಈಡಾಗುತ್ತಾನೆ. ಈತನನ್ನು ಹೀಗೆ ಹುಚ್ಚು ಮಾಡಿರುವುದು ಜೀವನದಲ್ಲಿ ಯಾವುದೊ ನಿರಾಶೆ, ಕ್ಲೇಶ, ವ್ಯಥೆ ಇರಬಹುದು. ಜೀವಿಯನ್ನು ಇವು ಎದುರಿಸಿ ದಾಗ ಕೆಲವು ಧೀರರು ಅದರೊಡನೆ ಹೋರಾಡಿ ಪಾರಾಗುವರು; ಮತ್ತೆ ಕೆಲವ ರಿಗೆ ಅದು ಸಾಧ್ಯವಿಲ್ಲದಾಗ ಕುಡಿದು ಮರೆಯುವರು. ಇನ್ನೂ ದಾರುಣವಾದಾಗ ಅದನ್ನು ಮರೆಯುವುದಕ್ಕೆ ಮನಸ್ಸೆ ಬೇರೆ ವ್ಯಕ್ತಿಯಾಗಿ ಹಿಂದಿನದನ್ನು ಮರೆಯಲೆತ್ನಿಸುವುದು. ಇವರನ್ನೇ ಹುಚ್ಚರೆನ್ನಬಹುದು. ಒಂದು ಜೀವನದ ನಿರಾಶೆ, ವ್ಯಥೆ, ಇದನ್ನು ಸಹಿಸುವುದೇ ಅಷ್ಟು ಕಷ್ಟವಾದರೆ ನಾವು ಇದುವರೆಗೆ ಸಾಗಿಹೋದ ಜನ್ಮಗಳ ನೆನಪೆಲ್ಲ ಒಂದೇ ಸಲ ಬಂದರೆ ಏನು ಗತಿ. ಎಂತಹ ಧೀರರಾದರೂ ತತ್ತರಿಸಿ ಹೋಗುವರು ಅದರ ಭಾರಕ್ಕೆ. ಅದಕ್ಕೇ ದೇವರು ಸದ್ಯಕ್ಕೆ ನಮ್ಮ ಹಿಂದಿನದನ್ನು ಮರೆಯುವ ವರ ಕರುಣಿಸಿರುವನು ಎಂದು ಕೊಂಡೆ.

ನಮ್ಮ ಬಸ್ಸಿನ ಮುಂದೆಯೇ ಮತ್ತೊಬ್ಬ ವೃದ್ಧಸ್ತ್ರೀ ಯಾತ್ರಿಕೆ, ಕೇದಾರ ದಿಂದ ನಡೆದುಕೊಂಡು ಬಂದು ಈಗ ಬಸ್ಸಿನಲ್ಲಿ ಪಿಪ್ಪಲ್‌ಕೋಟಿಗೆ ಹೋಗಲು ಯತ್ನಿಸಿದಳು. ಬಸ್ಸಿನಲ್ಲಿ ಬಿಟ್ಟ ಕರೆದುಕೊಂಡು ಹೋಗಿ ಎಂದು ಬಸ್ಸಿನನನ್ನು ಕೇಳಿದಳು. ಅವನು ಕಂಡಕ್ಟರ್ ಹತ್ತಿರ ಹೋಗು ಎಂದ. ಕಂಡಕ್ಟರ್ ಇನ್‌ಸ್ಪೆಕ್ಟರ್ ಹತ್ತಿರ ಹೋಗು ಎಂದ. ಹೀಗೆ ಒಬ್ಬರು ಇನ್ನೊಬ್ಬರ ಹತ್ತಿರ ಹೋಗು ಎಂದು ಮೂಲೆಯಿಂದ ಮೂಲೆಗೆ ಆಕೆಯನ್ನು ಕಳುಹಿಸುತ್ತಿದ್ದರು.

ಅವಳು ಒಂದೆರಡು ಕಡೆ ಹೋಗಿ ಕೊನೆಗೆ ತನ್ನ ಹಾಸಿಗೆಯ ಮೇಲೆ ಕುಳಿತು "ನಾನು ನೆಹರು ಮಗನಿಗೆ ಕಾಗದ ಬರೆಯುತ್ತೇನೆ, ನನ್ನಂತಹ ಹೆಂಗಸಿಗೆ ಹೀಗೆ ತೊಂದರೆ ಕೊಡುತ್ತಾರೆ ಈ ಜನ" ಎಂದು ಕೂಗಾಡಿದಳು. ಹತ್ತಿರಿದ್ದವರು ಇವಳೂ ಒಬ್ಬ ಹುಚ್ಚಿ ಎಂದು "ಯಾವ ನೆಹರು, ಪ್ರಧಾನಿ ನೆಹರೂನೆ?" ಎಂದರು. ಆಕೆ "ಹೌದು, ನಮ್ಮಂತಹವರಿಗೆಲ್ಲ ಮಗ ಅಲ್ಲವೆ ಅವನು" ಎಂದು ಧೈರ್ಯವಾಗಿ ಹೇಳಿದಳು. ಆಕೆ ಹುಚ್ಚಿಯೋ ಬೆಪ್ಪಿಯೋ ಏನಾದರೂ ಆಗಲಿ, ನಿಜವಾಗಿ ನಮ್ಮ ಪಂಡಿತ ನೆಹರು ಧನ್ಯ ಎಂದುಕೊಂಡೆ. ಹೆತ್ತ ತನ್ನ ತಾಯಿಯಿಂದ ಮಗ ಅನ್ನಿಸಿಕೊಳ್ಳುವುದಲ್ಲ ದೊಡ್ಡಸ್ತಿಕೆ. ಆದರೆ ಅನಾಮಧೇಯಳೊಬ್ಬಳು ಪ್ರಧಾನಿಯನ್ನು ತನ್ನ ಸ್ವಂತ ಮಗನಂತೆ ನೋಡಿ ಆ ಸಲುಗೆಯಂತೆ ಮಾತನಾಡಿದಾಗ, ಪ್ರಧಾನಿ ನೆಹರು ಮೇಲೆ ವಿಶ್ವಾಸ ಪ್ರೀತಿ ಎಷ್ಟು ಆಳವಾಗಿ ನಮ್ಮ ಜನಾಂಗದಲ್ಲಿ ಬೇರೂರಿದೆ ಎಂದು ಗೋಚರಿಸಿತು. ಇಂತಹ ಹಲವು ತಾಯಂದಿರ ಹರಕೆಯ ಬಲ ಇಂದು ನೆಹರೂಗೆ ನೆರವಾಗಿ ನಿಂತು ದೇಶದಲ್ಲಿರುವ ಕಾರ್ಪಣ್ಯ ಕಷ್ಟನಷ್ಟಗಳನ್ನು ಅವನ ಮೂಲಕ ನಿವಾರಿಸಲು ಯತ್ನಿಸುತ್ತಿವೆ.

ಬಸ್ಸು ೮ ಗಂಟೆಗೆ ಬಿಟ್ಟಿತು. ಇಲ್ಲಿಂದ ಹತ್ತು ಮೈಲಿ ಅಳಕನಂದಾ ನದೀ ತೀರದಲ್ಲೇ ಹೋಗುವುದು. ಸ್ವಲ್ಪ ದೂರದಲ್ಲಿ ಕಿರೀಟವನ್ನು ಧರಿಸಿದಂತೆ ಎರಡು ಹಿಮಾವೃತ ಶಿಖರಗಳು ಕಂಡವು. ಅದೇ ಬದರೀನಾಥ ಶಿಖರ ಎಂದು ಹೇಳಿದರು. ೯ ಗಂಟೆ ಹೊತ್ತಿಗೆ ಪಿಪ್ಪಲ್‌ಕೋಟಿಯನ್ನು ಸೇರಿದೆವು. ಇದೇ ಬಸ್ಸು ರೋಡಿನ ಕೊನೆ. ಇಲ್ಲಿಂದಲೂ ಮುಂದಕ್ಕೆ ಬಸ್ಸಿನ ರಸ್ತೆಯನ್ನು ಮಾಡುತ್ತಿರುವರು. ಎರಡು ಮೂರು ಮೈಲಿ ರೋಡು ಆಗಿದೆ. ಆದರೆ ಪ್ರಯಾಣದ ಬಸ್ಸುಗಳು ಇದಕ್ಕಿಂತ ಮುಂದಕ್ಕೆ ಹೋಗುವುದಿಲ್ಲ.

ಪೀಪಲ್‌ಕೋಟಿಯಲ್ಲಿ ಬೇಕಾದಷ್ಟು ಕೂಲಿಗಳು ಇರುವರು. ಬದರಿಗೆ ಹೋಗುವವರು ಇಲ್ಲಿಂದ ಕೂಲಿ ಮಾಡಿಕೊಂಡು ಹೋಗುತ್ತಾರೆ. ಇಲ್ಲಿದ್ದ ಒಂದು ಧರ್ಮಶಾಲೆಯಲ್ಲಿ ತಂಗಿ ಮಾರನೆ ದಿನ ಎಂದಿನಂತೆ ಐದು ಗಂಟೆಗೆ ನಮ್ಮ ಪ್ರಯಾಣವನ್ನು ಕಾಲುನಡಿಗೆಯಲ್ಲಿ ಮುಂದುವರಿಸಿದೆವು. ಇಲ್ಲಿಂದ ಮುಂದಕ್ಕೆ ಬದರಿ ಸೇರುವವರೆಗೆ ಅಳಕಾನಂದ ನದಿ ನಮ್ಮ ಪಕ್ಕದಲ್ಲೆ ಹರಿಯುತ್ತಿರುವುದು.

ಮಂದಾಕಿನಿ ನದಿ ಕೇದಾರಕ್ಕೆ ಹೋಗುವಾಗ ನಮಗೆ ಜೊತೆಗಾತಿಯಾದಂತೆ ಅಳಕನಂದ ಬದರಿಗೆ ಹೋಗುವತನಕ ನಮಗೆ ಜೊತೆಗಾತಿಯಾಗುವಳು. ಅಳಕನಂದಾ ನದಿ ಮಂದಾಕಿನಿ ನದಿಯಷ್ಟು ಶುಭ್ರವಾಗಿಲ್ಲ. ಆದರೆ ಘರ್ಜನೆ ಹೆಚ್ಚು. ಈಗ ನಾವು ಹೋಗುತ್ತಿರುವ ರಸ್ತೆಯ ಕೆಳಗೆ ಅಳವಾದ ಕಣಿವೆಯಲ್ಲಿ ಹೋಗುತ್ತಿರುವಳು. ಅವಳ ದರ್ಶನ ಕೂಡ ನಮಗೆ ಆಗುತ್ತಿರಲಿಲ್ಲ. ಅವಳು ಮೊರೆಯುತ್ತಿರುವುದು ಮಾತ್ರ ಕೇಳಿಸುತ್ತದೆ. ದಾರಿ ಪಕ್ಕದಲ್ಲೆಲ್ಲ ದೊಡ್ಡ ದಂಟಿನ ಸೊಪ್ಪಿನಂತೆ ಚುರುಚುರಕೆ ಸೊಪ್ಪು ಬೆಳೆದಿರುವುದು. ಯಾರೋ ಮದ್ರಾಸಿನ ಕಡೆಯವರಿರಬಹುದು ; ಕೀರೆಸೊಪ್ಪಿನ ಜಾತಿಗೆ ಸೇರಿದುದು, ಇದನ್ನು ಬೇಯಿಸಿ ತಿನ್ನಬಹುದೆಂದು, ಇದನ್ನು ಬರಿಯ ಕೈಯಲ್ಲಿ ಕೀಳಲು ಹೋದರು. ಆ ಸಾಧು ವೇಶದಲ್ಲಿರುವ ಸೊಪ್ಪು ಚೇಳಿನಂತೆ ಇವರಿಗೆ ಕಚ್ಚಿತು. ಕೈಯನ್ನು ತಕ್ಷಣವೇ ಆತ ಹಿಂದಕ್ಕೆ ತೆಗೆದ. ಈ ಎಲೆ ದೇಹದ ಯಾವ ಭಾಗಕ್ಕಾದರೂ ತಗಲಿದರೆ ಮೊದಲು ನವೆಯಾಗುವುದು. ಆಮೇಲೆ ಉರಿಯುವುದು. ಇದರಿಂದ ಸುಧಾರಿಸಿಕೊಳ್ಳಬೇಕಾದರೆ ಕೆಲವು ಗಂಟೆ ಕಾಲ ಬೇಕು. ಈ ಸೊಪ್ಪೊಂದು ದಾರಿಯಲ್ಲೆಲ್ಲ ಹುಲುಸಾಗಿ ಬೆಳೆದಿರುವುದು. ಇಲ್ಲಿಯ ಕೂಲಿಯವರು ಇಂತಹ ದುಷ್ಟ ಸ್ವಭಾವದ ಸೊಪ್ಪನ್ನು ಕೂಡ ಬಿಡುವುದಿಲ್ಲ. ಇದನ್ನು ಹೇಗೊ ಕತ್ತರಿಸಿ ಬೇಯಿಸಿ ಆ ನೀರನ್ನೆಲ್ಲ ಚೆಲ್ಲಿ ಬರೀ ಸೊಪ್ಪಿಗೆ ಉಪ್ಪು ಹಾಕಿ ತಿನ್ನುವರು. ಹುಲಿ ಸಿಂಹ ಹಿಡಿದು ಪಳಗಿಸುವ ಮನುಷ್ಯ ಈ ಸೊಪ್ಪನ್ನು ಬಿಡುತ್ತಾನೆಯೆ!

ನಾಲ್ಕು ಮೈಲಿ ನಡೆದ ಮೇಲೆ ಗರುಡಗಂಗೆ ಎಂಬ ಗ್ರಾಮ ಸಿಕ್ಕುವುದು. ಬೆಟ್ಟದಿಂದ ಹರಿದು ಬಂದ ಗರುಡಗಂಗಾ ಎಂಬ ನದಿ ಇಲ್ಲಿ ಹರಿಯುವುದು. ಸ್ವಲ್ಪ ದೂರದಲ್ಲಿ ಇದು ಅಳಕನಂದಾ ನದಿಗೆ ಸೇರುವುದು. ಗರುಡಗಂಗಾ ನದಿ ಪಕ್ಕದಲ್ಲೆ ಒಂದು ಗರುಡನ ವಿಗ್ರಹವಿದೆ. ಅದರ ಮುಂದೆ ಸ್ನಾನ ಮಾಡುವುದಕ್ಕೆ ಒಂದು ಕೊಳ ಇದೆ. ಅಲ್ಲಿ ಬೇಕಾದಷ್ಟು ಸಣ್ಣ ನುಣುಪಾದ ಕಲ್ಲುಗಳಿವೆ. ಅಲ್ಲಿಯ ಕಲ್ಲನ್ನು ಮನೆಯಲ್ಲಿಟ್ಟರೆ ಸರ್ಪಭಯವಿಲ್ಲ ಎನ್ನುವರು. ಸರ್ಪಕ್ಕೂ ಗರುಡನಿಗೂ ವೈರ ತಾನೆ. ಆದರೆ ಅದು ಎಷ್ಟುಮಟ್ಟಿಗೆ ನಿಜವೊ ನಾಸರಿಯೆ. ಅಲ್ಲಿಂದ ಎರಡು ಮೈಲಿ ಹೋದರೆ ಪಾತಾಳಗಂಗೆ ಎಂಬ ಗ್ರಾಮ ಸಿಕ್ಕುವುದು. ಇದಕ್ಕೆ ಹೋಗುವಾಗ ಸುಮಾರು ಒಂದು ಮೈಲಿ ಬಹಳ ಕಡಿದಾದ ರಸ್ತೆ. ರಸ್ತೆ

ಎರಡು ಮೂರು ಅಡಿ ಅಗಲ ಇರಬಹುದು. ಬೆಟ್ಟದ ಅಂಚಿನಲ್ಲಿ ಕೊರೆದು ಮಾಡಿರುವರು. ಎಡಗಡೆ ಬಹಳ ಆಳದಲ್ಲಿ, ನಿಜವಾಗಿಯೂ ಪಾತಾಳದಲ್ಲಿಯೇ ಹರಿಯುತ್ತಿರುವುದೋ ಎಂಬಂತೆ ನದಿ ನಮ್ಮ ಕಣ್ಣಿಗೆ ಬೀಳದೆ ಹರಿದು ಹೋಗುತ್ತಿದೆ. ಅದರ ಮರ್ಮರ ನಾದ ಒಂದೇ ಕೇಳುವುದು. ಆ ಪಾತಾಳಗಂಗೆಯೂ ಹತ್ತಿರದಲ್ಲೇ ಅಳಕನಂದೆಗೆ ಸೇರುವುದು. ಅಲ್ಲಿಂದ ಸುಮಾರು ಎರಡುಮೈಲಿ ಹೋದ ಮೇಲೆ ಗುಲಾಬ್‌ಕೋಟಿ ಸಿಕ್ಕಿತು. ಇಂದು ಇಲ್ಲೇ ಒಂದು ಚಿಟ್ಟಿಯಲ್ಲಿ ಇಳಿದುಕೊಂಡೆವು. ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದು ಸ್ನಾನಕ್ಕೆ ಹೋಗಿದ್ದಾಗ ನಮ್ಮ ಮೂವರು ಸಾಮಾನು ಹೊರುವ ಕೂಲಿಗಳೂ ಕೋಪಿನ ಧಾರಿಗಳಾಗಿ ಸ್ನಾನ ಮಾಡಲು ಮತ್ತು ಬಟ್ಟೆ ಒಗೆಯಲು ನಿಷ್ಕರ್ಷಿಸಿ ಬಿಟ್ಟಿದ್ದರು! ಇದೇ ಮೊದಲನೆಯ. ಸಲಿ ಅವರು ಬಟ್ಟೆ ಒಗೆಯುವುದನ್ನು ನಾನು ನೋಡಿದ್ದು. ಸ್ನಾನಮಾಡುವಾಗ ಇದುವರೆಗೆ ನಮಗೆ ಕಾಣದ ಜನಿವಾರ ಹೊರಗೆ ಕಂಡಿತು. ಒಳ್ಳೆ ದಪ್ಪನಾಗಿ, ಹಲವು ದಿನದ ಬೆವರು ಕೊಳೆಯಲ್ಲ ಸೇರಿ, ಅದು ಸುತ್ತಲಿ ದಾರದಂತೆ ಆಗಿತ್ತು. ಅವರು ತಮ್ಮ ಮೈಗೆ ಸೋಪು ಹಾಕಿ ತಿಕ್ಕುವುದಕ್ಕಿಂತ ಹೆಚ್ಚಾಗಿ ಜನಿವಾರವನ್ನು ಶುದ್ಧಿ ಮಾಡುತ್ತಿದ್ದರು. ಅದು ಧರ್ಮ ಪೀಠವಲ್ಲವೆ!

ಗುಲಾಬ್ ಕೋಟಿಯಲ್ಲಿ ಒಂದು ಪುರಾತನ ಲಕ್ಷ್ಮೀನಾರಾಯಣ ದೇವಸ್ಥಾನವಿದೆ. ಇದರ ಎತ್ತರ ಸುಮಾರು ೫೨೦೦ ಅಡಿಗಳು. ಇಲ್ಲಿ ಅಂದು ತಂಗಿದ್ದು ಮಾರನೆ ದಿನ ಹೊರಟೆವು. ಇಲ್ಲಿಂದ ಎರಡು ಮೈಲಿ ಹೋದರೆ ಹೇಲಂಗ್ ಎಂಬ ಗ್ರಾಮ ಸಿಕ್ಕುವುದು. ಇಲ್ಲಿ ಒಂದು ಧರ್ಮಶಾಲೆ ಇದೆ, ಕೆಲವು ಅಂಗಡಿಗಳಿವೆ. ಟೀ ಕುಡಿದು ಮುಂದಕ್ಕೆ ಹೊರಟೆವು. ಇಲ್ಲಿಂದ ರಸ್ತೆ ಕಡಿದಾಗುತ್ತ ಬರುವುದು. ಕೇದಾರನಾಥದ ಕಡೆಗೆ ಇರುವಷ್ಟು ಸುಗಮವಾಗಿಲ್ಲ. ಇಕ್ಕಟ್ಟು, ಕೆಲವು ವೇಳೆ ಆ ದಾರಿಯಲ್ಲಿ ಕುರಿಯ ಮಂದೆ ನಮ್ಮ ಎದುರಿಗೆ ಹೋದರೆ ಸುಮಾರು ಐದು ನಿಮಿಷಗಳವರೆಗೆ ನಾವು ಮೂಗು ಮುಚ್ಚಿಕೊಂಡು ನಿಂತುಕೊಳ್ಳಬೇಕಾಗುವುದು. ಅಷ್ಟೊಂದು ಧೂಳು. ಇಲ್ಲಿ ಕುರುಬರು ಯಾತ್ರೆಯ ಸಮಯದಲ್ಲಿ ತಮ್ಮ ಮಂದೆಯನ್ನೆಲ್ಲ ಚಿಟ್ಟಿಯಿಂದ ಚಿಟ್ಟಿಗೆ ಸಾಮಾನು ಸಾಗಿಸುವುದಕ್ಕೆ ಉಪಯೋಗಿಸುವರು. ಪ್ರತಿ ಕುರಿಯ

ಮೇಲೂ ಹತ್ತು ಸೇರು ಧಾನ್ಯ ಹೊರುವ ಚೀಲಗಳನ್ನು ಹಾಕುವರು. ಅದು ಅದರ ಬೆನ್ನಿನ ಮಧ್ಯದಲ್ಲಿರುವುದು. ದಾರಿಯಲ್ಲಿ ಸಿಕ್ಕಿದ ಮೇವನ್ನೆಲ್ಲಾ ತಿನ್ನುತ್ತಾ ನಿಧಾನವಾಗಿ ಹೋಗುವುದು. ಇದರಿಂದ ಕುರುಬರಿಗೆ ಅದರ ತುಪ್ಪಟಕ್ಕಿಂತ ಹೆಚ್ಚು ಲಾಭ ಬರುವುದು. ಒಂದು ಮಂದೆಯಲ್ಲಿ ಸುಮಾರು ೨೦೦ ಕುರಿಗಳಿದ್ದರೆ ೨ ಸಾವಿರ ಸೇರು ಧಾನ್ಯ ಸಾಗಿಸುವುವು. ಅದರಮೇವಿಗೆ ಕುರುಬ ಏನೂ ಖರ್ಚು ಮಾಡಬೇಕಾಗಿಲ್ಲ. ಇಂತಹ ಮಂದೆಗಳು ಅನೇಕವೇಳೆ ನಮಗೆ ಮಧ್ಯೆ ಸಿಕ್ಕುವುವು ಪ್ರತಿಯೊಂದು ಮಂದೆ ಹಿಂದೆಯೂ ಕುರುಬ ಮತ್ತು ಅವನ ಹಿಂದೆ ತೋಳದಂತೆ ಇರುವ ಎರಡು ನಾಯಿಗಳು ಹೋಗುವುವು. ಕುರಿಯ ಕೊರಳಿಗೆ ಸಣ್ಣಸಣ್ಣ ಗಂಟೆಗಳನ್ನು ಕಟ್ಟಿರುವರು. ೨೦೦ ಕುರಿಗಳು ಕಿರಿಯ ಗಂಟೆ ನಿನಾದವನ್ನು ಮಾಡಿಕೊಂಡು ಆ ಗಿರಿಯ ಮಧ್ಯೆ ಹೋಗುತ್ತಿದ್ದರೆ ಆ ಶಬ್ದ ಬಹಳ ದೂರದವರೆಗೆ ಕೇಳುವುದು. ಯಾತ್ರಿಕರಿಗೆ ಸದಾ ಕೇಳುವ ಅಳಕೆನಂದೆಯ ಹಿಮ್ಮೇಳದಲ್ಲಿ ಗಂಟೆಯ ಶಬ್ದ ಹೊಸ ಸ್ವರದಂತೆ ಮಧ್ಯೆ ಮಧ್ಯೆ ಎದ್ದು ಮಾಯವಾಗುವುದು. ಈ ದಾರಿಯಲ್ಲೆ ಬದರಿಗೆ ಹೋಗಿ ಬರುತ್ತಿದ್ದ ನಾವು ಹಿಂದೆ ಕಂಡ ಬಂಗಾಳಿ ವೈದ್ಯರು ಸಿಕ್ಕಿದರು. ನೊಣದ ಹಾವಳಿಗೆ ಔಷಧಿ ಇದೆಯೇ ಎಂದು ಕೇಳಿದಾಗ ಅವರ. ಔಷಧಿಯನ್ನೆಲ್ಲ ಜೋಶೀಮಠದ ವೈದ್ಯರ ಹತ್ತಿರ ಬಿಟ್ಟಿರುವೆ, ಅವರಿಗೆ ಚೀಟಿ ಬರೆದು ಕೊಡುವೆ ಎಂದು ಬರೆದುಕೊಟ್ಟರು.

ಹತ್ತುಗಂಟೆ ಹೊತ್ತಿಗೆ ಜೋಶೀಮಠಕ್ಕೆ ಬಂದೆವು. ಜೋಶೀ ಮಠ ಪರ್ವತ ಪ್ರಾಂತ್ಯದಲ್ಲಿ ಸಿಕ್ಕುವ ಒಂದು ದೊಡ್ಡ ಊರು ಎಂತಲೇ ಹೇಳಬೇಕು. ಬದರೀನಾಥ ದೇವಾಲಯ ಮುಚ್ಚಿದ ಮೇಲೆ ಆರು ತಿಂಗಳು ಇಲ್ಲಿಯೇ ಆ ಉತ್ಸವ ಮೂರ್ತಿಯನ್ನು ಇಟ್ಟು ಪೂಜಿಸುವರು. ಶ್ರೀ ಶಂಕರಾಚಾರ್ಯರು ಸ್ಥಾಪಿಸಿದ ಮುಖ್ಯ ನಾಲ್ಕು ಮಠಗಳಲ್ಲಿ ಒಂದಾದ ಜೋಶೀಮಠ ಇಲ್ಲಿದೆ. ಈ ಊರಿನ ನಿಜವಾದ ಹೆಸರೆ ಜ್ಯೋತಿರ್ಮಠ, ಜೋಶೀ ಎನ್ನುವುದು ಅದರ ಅಪಭ್ರಂಷ. ಇಂಡಿಯನ್ ಯೂನಿಯನ್ನಿನ ಸಣ್ಣ ಮಿಲಿಟರಿ ಕೇಂದ್ರ ಕೂಡ ಇಲ್ಲಿದೆ. ಇಲ್ಲಿಂದ ೩೩ ಮೈಲಿ ದೂರದಲ್ಲೇ ಟಿಬೆಟ್ ಪ್ರಾರಂಭವಾಗುವುದು. ಟಿಬೆಟ್ ರಸ್ತೆಯಲ್ಲಿ ಇಂಡಿಯಾ ದೇಶದ ಕೊನೆಯ ಮಿಲಿಟರಿ ಕೇಂದ್ರ ಇದು. ಇಲ್ಲಿ ಟೆಲಿಗ್ರಾಫ್

ಆಫೀಸು, ಆಸ್ಪತ್ರೆ ಎಲ್ಲಾ ಇವೆ. ಶ್ರೀ ಶಂಕರಾಚಾರ್ಯರು ಇಲ್ಲೇ ಬ್ರಹ್ಮಸೂತ್ರಕ್ಕೆ ಭಾಷ್ಯ ಬರದರೆಂದು ಮಠದ ಮುಂದಿರುವ ಒಂದು ಅರಳಿಕಟ್ಟೆ ತೋರಿಸುವರು. ಅಂದು ಸ್ನಾನ ಊಟವಾದಮೇಲೆ ಆಸ್ಪತ್ರೆ ಕಡೆ ಹೊರಟೆವು. ನಮ್ಮಲ್ಲಿ ಹಲವರಿಗೆ ತುಂಗನಾಥದಿಂದ ಇಳಿದು ಬರುವಾಗ ಕಚ್ಚಿದ ನೊಣದಿಂದ ಆದ ಗಾಯದ ಚಿಕಿತ್ಸೆಗಾಗಿ, ನಮ್ಮ ಹತ್ತಿರಿದ್ದ ಬಂಗಾಳಿ ಬಾಬು ಕೊಟ್ಟ ಪತ್ರವನ್ನು ಆ ಡಾಕ್ಟರಿಗೆ ತೋರಿಸಿದೆವು. ಆತ “ಇಲ್ಲಿ ನೊಣ ಕಚ್ಚುವುದು ಸಾಮಾನ್ಯ, ಆದಕ್ಕೆ ನಿಮ್ಮ ಹತ್ತಿರ ಇರುವ ಔಷದಿಯಿಂದ ಏನೂ ಪ್ರಯೋಜನವಿಲ್ಲ, ನನ್ನ ಹತ್ತಿರ ಅದಕ್ಕಾಗಿ ಒಂದು (Specific) ಇಟ್ಟಿರುವೆನು” ಎಂದು ಎಲ್ಲರಿಗೂ ಅದನ್ನು ಹಚ್ಚಿ ಇನ್ನೂ ಕೆಲವು ದಿನಗಳಿಗೆ ಆಗುವಷ್ಟು ಔಷಧಿಯನ್ನು ನಮಗೆ ಕೊಟ್ಟನು. ಆಸ್ಪತ್ರೆಯಲ್ಲಿ ಒಬ್ಬ ತೆಲಗುದೇಶದ ಕಡೆಯವನು ಪೆರಾಲಿಸಿಸ್‌ನಿಂದ ನರಳುತ್ತಿರುವನು; ಅವನ ಹತ್ತಿರ ಸ್ವಲ್ಪ ತೆಲುಗಿನಲ್ಲಿ ಮಾತನಾಡಿ ಎಂದನು. ನಮ್ಮಲ್ಲಿ ತೆಲಗು ಬಲ್ಲವರು ಅವನ ಹತ್ತಿರ ಅವರು ಮಾತನಾಡಿದರು. ಆತ ಕೇದಾರ ಬದರಿ ನೋಡಿಕೊಂಡು ಹಿಂತಿರುಗುತ್ತಿದ್ದಾಗ ಹೀಗೆ ಆಯಿತೆಂದು ದುಃಖಪಟ್ಟ. ಹೊಸದಾಗಿ ಮದುವೆ ಆದವನು, ಅವನ ಅತ್ತೆ ಮತ್ತು ಹೆಂಡತಿ ಅವನೊಡನೆ ಕಾಯುತ್ತಿದ್ದರು. ಅದು ಮೇಲಾಗುವುದಕ್ಕೆ ಎಷ್ಟು ದಿನವಾಗುವುದೋ ಹೇಳಲಾರೆ, ಅವನ ಕೆಳಗೆ ಒಂದು ದಂಡಿಯಲ್ಲಿ ಇಳಿದು ಯಾವುದಾದರೂ ದೊಡ್ಡ ಆಸ್ಪತ್ರೆಗೆ ಹೋದರೆ ಮೇಲು ಎಂದು ಡಾಕ್ಟರ್ ಹೇಳಿದರು. ಪಾಪ! ಯಾತ್ರೆಗೆ ಬಂದಾಗಲೇ ಬರಬೇಕೆ ಅದು. ದೇವರಿವನಿಗೆ ಬೇಗ ಒಳ್ಳೆಯದನ್ನು ಮಾಡಲಿ ಎಂದು ಆಶಿಸಿ ಜೋಶೀ ಮಠದಲ್ಲಿದ್ದ ಕೆಲವು ದೇವಸ್ಥಾನಗಳನ್ನು ನೋಡಲು ಹೋದೆವು.

ಅಲ್ಲಿ ಒಂದು ನರಸಿಂಹಸ್ವಾಮಿ ದೇವಸ್ಥಾನವಿದೆ. ನರಸಿಂಹಸ್ವಾಮಿಯ ದೇವಸ್ಥಾನ ಉತ್ತರ ಇಂಡಿಯಾದಲ್ಲಿ ಅಪರೂಪ. ಯಾರೊ ರಾಮಾನುಜ ಸಂಪ್ರದಾಯದವರು ಅದನ್ನು ಸ್ಥಾಪಿಸಿರಬೇಕು. ಮಂತ್ರ ಹೇಳುವಾಗ ನರಸಿಂಹಕರಾವಲಂಬನ ಸ್ತೋತ್ರ ಮುಂತಾದುವನ್ನೇ ಹೇಳುತ್ತಿದ್ದನು. ಅಲ್ಲಿ ವಾಸುದೇವನ ಮತ್ತೊಂದು ದೇವಸ್ಥಾನವಿದೆ. ಆದು ಧ್ಯಾನಮಗ್ನ ವಾಸುದೇವ. ಆ ದೇವಸ್ಥಾನ

ದಲ್ಲಿ ಸುತ್ತಲೂ ಪ್ರದಕ್ಷಿಣೆ ಬರುವಾಗ ಒಂದು ಕಡೆ ಗಣೇಶ, ಇನ್ನೊಂದು ಕಡೆ ನವದುರ್ಗೆಯ ವಿಗ್ರಹಗಳು ಮತ್ತೊಂದು ಕಡೆ ಶಿವಪಾರ್ವತಿ ಕಾಣುತ್ತವೆ. ಶೈವ ವೈಷ್ಣವ ಶಾಕ್ತ ವಿಗ್ರಹಗಳೆಲ್ಲ ಇಲ್ಲಿ ಸಂಧಿಸಿರುವುವು.

# ೧೪

## ದೇವದೇಖನಿ

ಬುಧವಾರ ೨೬ನೇ ತಾರೀಖು ಜೋಶಿಮಠವನ್ನು ಐದು ಗಂಟೆಗೆ ಬಿಟ್ಟೆವು. ಅಲ್ಲಿಂದ ಒಂದೇ ಸಮನಾಗಿ ಎರಡು ಮೈಲಿ ಇಳಿದು ಹೋಗಬೇಕು. ಎರಡು ಮೈಲಿಯಲ್ಲಿ ೧೨೦೦ ಅಡಿಗಳು ಕೆಳಗೆ ಹೋಗುವೆವು. ಅಲ್ಲಿ ವಿಷ್ಣುಗಂಗೆ ಅಳಕ ನಂದೆಯನ್ನು ಸೇರುವುದು. ಆ ಎರಡು ಪ್ರವಾಹಗಳು ಅತಿ ವೇಗದಲ್ಲಿ ಕೆಳಗೆ ಇರುವ ಬಂಡೆಯನ್ನು ಅಪ್ಪಳಿಸಿಕೊಂಡು ಹೋಗುವಾಗ ನದಿಯೆಲ್ಲಾ ಕುದಿಯುತ್ತಿರುವಂತೆ ಕಾಣುವುದು. ಸೇತುವೆಯ ಮೇಲೆ ಹೋಗುತ್ತಿರುವಾಗ ಹರಿವನದಿಯ ಧ್ವನಿಗೆ ಅದು ಕಂಪಿಸುತ್ತಿರುವುದು. ಇದೊಂದು ಅದ್ಭುತ ದೃಶ್ಯ. ಕೆಲವು ವೇಳೆನಾವು ಮೈಸೂರಿನಲ್ಲಿ ಕನ್ನಂಬಾಡಿ ತಟ್ಟೆ ತುಂಬಿದಾಗ ಕೋಡಿಯಲ್ಲಿ ಹರಿದು ಹೋಗುವ ನೀರನ್ನು ನೋಡಿ ಬೆರಗಾಗುವೆವು. ಅದಕ್ಕೆ ಹತ್ತರಷ್ಟು ನೀರು, ಜಲವೆಲ್ಲ ಶ್ವೇತವರ್ಣ, ಅದು ಮದ್ದಾನೆಗಳಂತೆ ಬಿದ್ದಿರುವ ಕಲ್ಲು ಬಂಡೆಗಳನ್ನು ಅಪ್ಪಳಿಸಿಕೊಂಡು ಹೋಗುವಾಗ ಆ ಫೇನಮಯ ದೃಶ್ಯದ ಮೇಲೆ ರವಿಕಾಂತಿ ಬಿದ್ದರೆ, ಆ ಚಿತ್ರವನ್ನು ಓದುಗರೇ ಊಹಿಸಿಕೊಳ್ಳಬಹುದು. ಇದೇ ಸ್ಥಳದಲ್ಲಿ ನಾರದ ಮಹರ್ಷಿಗಳು ತಪಸ್ಸು ಮಾಡಿದರಂತೆ. ಅವರಿಗೆ ವಿಷ್ಣು ಸಾಕ್ಷಾತ್ಕಾರವಾದನಂತೆ. ಈ ಸೌಂದರ್ಯದ ನೆಲವೀಡೆ ನಾರದರ ತಪೋಭೂಮಿ. ಹಿಂದಿನಿಂದಲೂ ಪ್ರಕೃತಿ ಸೌಂದರ್ಯವನ್ನು ನಮ್ಮ ಹಿಂದುಗಳು ಭಗವತ್ ಸಾಕ್ಷಾತ್ಕಾರಕ್ಕೆ ಉಪಯೋಗಿಸಿಕೊಂಡಿರುವರು. ಈಗ ಆ ಸಂಗಮಸ್ಥಳದ ಮೇಲುಗಡೆ ಒಂದು ವಿಷ್ಣು ದೇವಾಲಯವಿದೆ.

ಇಲ್ಲಿಂದ ಆರು ಮೈಲಿನ್ಷ್ ಹೊರಟರೆ ಪಾಂಡುಕೇಶ್ವರ ಸಿಕ್ಕುವುದು. ಇದೊಂದು ನಮ್ಮ ಹಿಂದೂ ಸಂಸ್ಕೃತಿಯಲ್ಲಿ ದೊಡ್ಡ ಸ್ಥಳವೆನ್ನಬಹುದು. ಮಹಾ ಭಾರತದಲ್ಲಿ ಬರುವ ಪಾಂಡುರಾಜ ಶಾಪಗ್ರಸ್ತನಾಗಿ ತನ್ನ ಹೆಂಡತಿ ಕುಂತಿ ಮತ್ತು ಮಾದ್ರಿಯರೊಂದಿಗೆ ತಪಸ್ಸಿನಲ್ಲಿ ಕಾಲ ಕಳೆಯಲು ಇಲ್ಲಿಗೆ ಬರುವನು. ಇಲ್ಲೇ ಕುಂತಿ ಧರ್ಮರಾಯ ಭೀಮ ಅರ್ಜುನರಿಗೆ, ಮಾದ್ರಿ ನಕುಲ ಸಹದೇವರಿಗೆ ಜನ್ಮವಿತ್ತುದು. ಪಂಚಪಾಂಡವರ ಜನ್ಮಸ್ಥಳವಿದು. ಅವರು ಆಡಿದ ಗುಡ್ಡ ಕಾಡುಗಳು ಇವು. ಅವರು ಮಿಂದ ಅಳಕನಂದೆಯೂ ಇದೇ. ಪಾಂಡುರಾಜ ಕೊನೆಗೆ ಶಾಪಕ್ಕೆ ತುತ್ತಾಗಿ ಮಡಿದ ತಾಣವೂ ಇದೇ. ಮಾದ್ರಿ ಪತಿಯೊಡನೆ ಸಹಗಮನ ಮಾಡಿದ ಸ್ಥಳವೂ ಇದೇ ಎಂದು ಹೇಳುವರು. ಈಗಲೂ ಜನ ಭೀಮ ಚೌಕಭಾರ ಆಡುತ್ತಿದ್ದ ಸ್ಥಳ ಇದು ಎಂದು ಹತ್ತಿರವಿರುವ ದೊಡ್ಡ ಬೆಟ್ಟವನ್ನು ತೋರುವರು. ಅವನು ಮರಕೋತಿ ಆಡಿದ ಮರಗಳೆಲ್ಲಾ ಈಗ ನಿರ್ನಾಮವಾಗಿ ಬಿಟ್ಟಿರಬಹುದು! ಆ ಜಗಜಟ್ಟಿ ಭೀಮನ ಬೆಳವಣಿಗೆಗೆ ತಕ್ಕ ವಾತಾವರಣ ಪಾಂಡುಕೇಶ್ವರ. ಇದೆಲ್ಲ ಗುಡ್ಡಗಾಡು. ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಬೇಕಾದರೆ ಹತ್ತಬೇಕು. ಇಳಿಯಬೇಕು. ಭೀಮ ಆ ಹಿಮಾಲಯದ ಭೋರ್ಗರೆವ ನದಿಯಲ್ಲಿ ಸ್ನಾನಮಾಡುವುದನ್ನು ಕಲಿತ ಮೇಲೆ ಮತ್ತಾವ ಮಡು ವಾಗಲಿ, ಸಾಗರವಾಗಲಿ ಅವನನ್ನು ಅಂಜಿಸದು. ಪಾಂಡವರೇ ತಮ್ಮ ಕೈಯಾರ ಕಟ್ಟಿದರು ಎಂದು ಇಲ್ಲಿ ಹತ್ತಿರವಿರುವ ಎರಡು ದೇವಸ್ಥಾನಗಳನ್ನು ತೋರುವರು. ಅದರಲ್ಲಿ ಒಂದು ಯೋಗಬದರಿನಾಥ, ಮತ್ತೊಂದು ವಾಸುದೇವ. ಈಗ ಇರುವ ದೇವಸ್ಥಾನ ಅವರು ಕಟ್ಟದೇ ಹೋಗಿದ್ದರೂ ಬಹುಶಃ ಯಾವುದೋ ಒಂದು ವಿಗ್ರಹ ಅವರ ಕಾಲದಿಂದಲೂ ಇದ್ದಿರಬಹುದು. ಈಗ ಚಾರಿತ್ರಿಕ ದೃಷ್ಟಿಯಿಂದ ಅವರು ಕಟ್ಟಿದರೆ, ಕಟ್ಟಲಿಲ್ಲವೆ, ಅದಲ್ಲ ಮುಖ್ಯ. ಈ ಸ್ಥಳಕ್ಕೆ ಆ ಸಂಬಂಧ ಬಂದುಹೋಗಿದೆ. ನಾವು ಈ ಸ್ಥಳದಲ್ಲಿ ಹೋಗುವಾಗ ಆ ಮಹಾ ವ್ಯಕ್ತಿಗಳು, ಅವರು ಭಾರತದಲ್ಲಿ ಮಾಡಿದ ಸಾಹಸಕಾರ್ಯ, ಇವನ್ನು ಮರೆಯುವಂತೆ ಇಲ್ಲ. ಕೇದಾರನಾಥದಲ್ಲಿ ಪಾಂಡವರು ತಪಸ್ಸುಮಾಡಿದ ಸ್ಥಳ ನೋಡುವೆವು. ಇಲ್ಲಿ ಪಾಂಡವರು ಪ್ರಪಂಚಕ್ಕೆ ಬಂದ ಸ್ಥಳವನ್ನು ನೋಡುವೆವು. ಆ ತಾಯಿ ಕುಂತಿ ಎಂತಹ ಆದರ್ಶ ಮಾತೆ! ಕೊನೆಯ ತನಕ ಮಕ್ಕಳ ಪ್ರೀತಿಗೆ ಪಾತ್ರಳಾಗಿಯೇ

ಉಳಿದುಕೊಂಡಳು. ಪಂಚಪಾಂಡವರಲ್ಲಿ ಒಬ್ಬನಿಂದ ತಾಯಿ ಎಂದು ಕರೆಸಿಕೊಳ್ಳುವ ಭಾಗ್ಯ ಒಂದು ಹೆಣ್ಣಿಗೆ ಬಂದರೆ ಎಷ್ಟೋ ಹಿಗ್ಗಿಹೋಗುವಳು. ಹೀಗಿರುವಾಗ ಧರ್ಮಕ್ಕೆ, ಕ್ಷಾತ್ರವೀರ್ಯಕ್ಕೆ, ಹೆಸರಾಂತ ಐವರಿಂದಲೂ ತಾಯಿ ಎಂದು ಕರೆಸಿಕೊಂಡು, ಇವಳು ಹೇಳಿದ ಪ್ರತಿಯೊಂದು ಮಾತನ್ನೂ ವೇದ ವಾಕ್ಯಕ್ಕೆ ಸಮನಾಗಿ ಕಂಡು, ಗೌರವಕ್ಕೆ ಪಾತ್ರಳಾದ ಕುಂತಿಯ ಆನಂದಕ್ಕೆ ಎಣೆಯಿಲ್ಲ. ಎಂತಹ ತಾಯಿ ಅವಳು! ಅಪಾಯ, ಕಷ್ಟಬಂದಾಗ, ತನ್ನ ಮಕ್ಕಳಾದ ಧರ್ಮರಾಯ ಭೀಮ ಅರ್ಜುನರನ್ನು ಬಲಿಕೊಡಲು ಸಿದ್ಧಳಾಗುವಳೆ ವಿನಃ ಮಾದ್ರಿಯ ಮಕ್ಕಳಾದ ನಕುಲ ಸಹದೇವರನ್ನು ಬಿಟ್ಟುಕೊಡಲೊಲ್ಲಳು. ಮಾದ್ರಿಯ ಆತ್ಮ ತನ್ನನ್ನು ಸದಾ ನೋಡುತ್ತಿದೆ ಎಂದು ಅವಳ ಮಕ್ಕಳನ್ನು ತನ್ನ ಮಕ್ಕಳಿಗಿಂತ ಹೆಚ್ಚು ನೋಡಿಕೊಂಡಳು. ಹತ್ತಿರದಲ್ಲಿರುವ ಮುಗಿಲನ್ನು ತೂರಿಹೋಗುವ ಹಿಮಾಲಯ ಶಿಖರದಂತೆ ಇದೆ ಕುಂತಿಯ ಹೃದಯ. ಅಷ್ಟು ಭವ್ಯವಾಗಿದೆ. ಸಾಧಾರಣ ದರ್ಜೆಯನ್ನು ಮೀರಿಹೋಗಿದೆ. ಆ ಪಂಚಪಾಂಡವರ ಭ್ರಾತೃವಾತ್ಸಲ್ಯ ಎಷ್ಟು ಅದ್ಭುತವಾದುದು. ಒಬ್ಬನು ಸದಾ ಮತ್ತೊಬ್ಬನಿಗೆ ಪ್ರಾಣ ನೀಡಲು ಸಿದ್ಧನಾಗಿದ್ದನು. ಮದುವೆಯಾಗಿ ಮಕ್ಕಳುಮರಿಯಾದ ಮೇಲೆ ಇಂತಹ ಪ್ರೇಮ ಉಳಿಯುವುದು ಅಪರೂಪ. ಬಹುಶಃ ಇಂತಹ ಜಾಜ್ವಲ್ಯ ಭ್ರಾತೃಪ್ರೇಮ ಮತ್ತೊಮ್ಮೆ ನಮಗೆ ಸಿಕ್ಕಬಹುದೆ ಅಥವಾ ವ್ಯಾಸರ ಮಹಾಭಾರತವೇ ಅದಕ್ಕೆ ಕೊನೆಯೇ ಎಂಬ ಸಂದೇಹ ನಮ್ಮಲ್ಲಿ ಮೂಡಬಹುದು. ಹಿಮಾಲಯದ ಪುಣ್ಯ ಸ್ಥಳ ತನ್ನ ಪ್ರಭಾವವನ್ನು ಪಾಂಡವರ ಮೇಲೆ ಬಾಲ್ಯದಲ್ಲಿಯೇ ಬೀರಿದ ಪರಿಣಾಮವಾಗಿಯೆ ಇರಬಹುದು ಅವರಲ್ಲಿ ಅಂತಹ ಉದಾತ್ತ ಭಾವನೆಗಳು ಮೂಡಲು ಅವಕಾಶವಾಗಿದ್ದು.

ಇಲ್ಲಿಂದ ಮೂರು ಮೈಲಿ ನಡೆದು ಹೋದರೆ ಲಂಬಗಾಡ್ ಎಂಬಲ್ಲಿ ಧರ್ಮಶಾಲೆ ಸಿಕ್ಕುವುದು. ಅಳಕನಂದ ನದೀತೀರದಲ್ಲೆ ಇಲ್ಲಿ ಧರ್ಮಶಾಲೆ ಇವೆ. ಬೇಕಾದಷ್ಟು ಗಿಡಮರಗಳು ಇರುವ ಸ್ಥಳ. ಒಳ್ಳೆಯ ದಟ್ಟವಾದ ಅರಣ್ಯಪ್ರದೇಶ ಇದು. ಇಲ್ಲಿಂದಲೇ ಬದರೀನಾಥಕ್ಕೆ ಬೇಕಾಗುವ ಸೌದೆಯನ್ನು ಸರಬರಾಜು ಮಾಡುವರು. ಒಂದು ಸಣ್ಣ ಬೆಟ್ಟದಂತೆ ಇತ್ತು ತುಂಬಿದ ಸೌದೆಯರಾಶಿ. ಜನರೇ ತಮ್ಮ

ಬೆನ್ನ ಮೇಲೆ ಸೌದೆಯನ್ನು ಹೊತ್ತುಕೊಂಡು ಹೋಗುವರು. ಇದು ಸುಮಾರು ೭೦೦೦ ಅಡಿಗಳ ಎತ್ತರದಲ್ಲಿದೆ. ಧರ್ಮಶಾಲೆ ಹಿಂದೆ ತಣ್ಣಗಿರುವ ನೀರಿನ ನದಿ ಹರಿಯುವುದು. ಸುತ್ತಲೂ ಕಾಡು ಇರುವುದರಿಂದ ಬಹಳ ತಂಪಾಗಿದೆ. ಇಂದು ನಾವು ಸುಮಾರು ೧೧ ಮೈಲಿ ನಡೆದು ಬಂದಿದ್ದೆವು. ಗಂಟೆ ಆಗಲೆ ಹನ್ನೊಂದಕ್ಕೆ ಮೀರಿತ್ತು. ಹೊಟ್ಟೆ ಹಸಿಯುತ್ತಿತ್ತು. ಅಡಿಗೆಯವನು ಇನ್ನೂ ಒಲೆ ಹಚ್ಚಿ ಅಡಿಗೆ ಮಾಡಬೇಕಾದರೆ ಎರಡು ಗಂಟೆಯಾದರೂ ಆಗುವುದು. ಅಂಗಡಿಯಲ್ಲಿ ಏನನ್ನು ತಿನ್ನಬಹುದೆಂದು ಆಲೋಚಿಸುತ್ತಿದ್ದಾಗ, ಕಡಲೇಕಾಯಿ ಮೇಲೆಂದು ತೋರಿತು. ನೊಣ ಅದರ ಸಿಪ್ಪೆಯ ಮೇಲೆ ಕುಳಿತಿರುವುದು. ಅದನ್ನು ತಿನ್ನುವಾಗ ಸಿಪ್ಪೆಯನ್ನು ಸುಲಿದು ಬಿಸಾಡುವುದರಿಂದ ಯಾವಅಪಾಯವೂ ಇಲ್ಲವೆಂದು ತೋರಿತು. ಇಂದು ಅಲ್ಲೆ ತಂಗಬೇಕು. ಸಂಜೆ ಆರು ಗಂಟೆಯ ಮೇಲೆ ಅಡ್ಡಾಡಿಕೊಂಡು ಬರುವುದಕ್ಕೆ ಹೊರಟಾಗ ಸ್ವಲ್ಪ ಮುಂದೆ ಹಿಮಶಿಖರಗಳು ಕಾಣುತ್ತಿದ್ದವು. ಸೂರ್ಯಾಸ್ತಮಯದ ಕಾಂತಿ ಅದರಮೇಲೆ ಬಿದ್ದಾಗ ಯಾರೋ ಅದಕ್ಕೆ ಚಿನ್ನದ ತಗಡನ್ನು ಹೊದಿಸಿದಂತೆ ತೋರುತ್ತಿತ್ತು. ಅನೇಕ ಜನ ಯಾತ್ರಿಕರು ಬದರಿಯಿಂದ ಹಿಂತಿರುಗಿ ಬರುತಿದ್ದರು. “ಜೈ ಬದರೀ ವಿಶಾಲಜಿಕಿ” ಎಂದು ನಮ್ಮನ್ನು ಸ್ವಾಗತಿಸಿದರು. ಅವರು ರಾತ್ರಿ ಅಲ್ಲಿ ತಂಗಿದ್ದು ಮಾರನೆ ದಿನ ಜೋಶೀಮಠದ ಮೇಲೆ ಹಿಂತಿರುಗುವರು. ನಾವು ಮಾರನೆ ದಿನ ಬದರೀನಾಥಕ್ಕೆ ಹೋಗುವೆವು.

ಲಂಬಗಾಡಿನಿಂದ ಹನುಮಾನ್ ಚಿಟ್ಟಿಗೆ ಮೂರೂಕಾಲು ಮೈಲಿ. ಬದರೀನಾಥಕ್ಕೆ ಹೋಗುವಾಗ ನಮಗೆ ಸಿಕ್ಕುವ ಕೊನೆಯ ಚಿಟ್ಟಿಯೇ ಇದು. ಇಲ್ಲಿಂದ ಐದು ಮೈಲಿ ಹೊರಟರೆ ನಾವು ಬದರೀನಾಥವನ್ನು ಸೇರುತ್ತೇವೆ. ಹನುಮಾನ್ ಚಿಟ್ಟಿಯವರೆಗೆ ಅಷ್ಟೇನೂ ಕಡಿದಿಲ್ಲ. ಅಲ್ಲಿ ಒಂದು ಹನುಮಂತನ ಸಣ್ಣ ದೇವಾಲಯವಿದೆ. ಹನುಮಂತನು ತನ್ನ ವೃದ್ಧಾಪ್ಯದಲ್ಲಿ ಇಲ್ಲಿ ಇದ್ದನೆಂದು ಹೇಳುವರು. ಭೀಮಸೇನ ಹನುಮಂತರು ಇಲ್ಲಿ ಒಮ್ಮೆ ಸಂದರ್ಶಿಸಿದರಂತೆ. ದ್ರೌಪತಿಯಾಣತಿಯಂತೆ ಭೀಮ ಮಂದಾರ ಪುಷ್ಪವನ್ನು ತರುವುದಕ್ಕೆ ಹೋಗಿದ್ದಾಗ ದಾರಿಯಲ್ಲಿ ಹನುಮಂತ ಬಾಲವನ್ನು ಬಿಟ್ಟುಕೊಂಡು ಕುಳಿತಿದ್ದನೆಂದೂ ಭೀಮ ಅವನನ್ನು ದಾರಿಯಿಂದ ಬಾಲವನ್ನು ತೆಗೆದುಕೊ ಎಂದಾಗ

ಹನುಮಂತನು ತಾನು ಒಂದು ಮುದಿ ಕೋತಿ, ನೀನೆ ಆ ಬಾಲವನ್ನು ಸರಿಸಿ ಹೋಗು ಎಂದನು. ಭೀಮ, ಕೀಚಕ ಜರಾಸಂಧಾದಿಗಳನ್ನು ಕೊಂದವನು, ಎಷ್ಟೆಷ್ಟು ಪ್ರಯತ್ನಪಟ್ಟರೂ ಮುದಿಕೋತಿಯ ಬಾಲವನ್ನು ಕೂಡ ಸರಿಸಲು ಆಗಲಿಲ್ಲವಂತೆ! ಆಗ ನೀನು ಯಾರೋ ದೊಡ್ಡದೇವಾಂಶಸಂಭೂತನೆಂದೂ, ನನ್ನ ಅಹಂಕಾರ ಇಳಿಸುವುದಕ್ಕೆ ನೀನು ಇಲ್ಲಿರುವೆ ಎಂದೂ, ಅವನೊಡನೆ ಸಖ್ಯ ಮಾಡಿಕೊಂಡು ಹಿಂತಿರುಗಿದ ಎಂದು ಮಹಾಭಾರತದಲ್ಲಿ ಹೇಳಿದೆ. ಅದೇ ಸ್ಥಳ ಇದು ಎಂದು ಇಲ್ಲಿ :ಹನುಮಾ‌ರ್‌ಚಿಟ್ಟಿಯನ್ನು ತೋರುವರು. ಇಲ್ಲಿಂದ ಒಂದು ಮೈಲಿ ರಸ್ತೆ ಸುಮಾರು ಸಮನಾಗಿಯೆ ಇರುವುದು. ಅನಂತರ ಮೂರು ಮೈಲಿಯಲ್ಲಿ ಸುಮಾರು ಎರಡು ಸಾವಿರ ಅಡಿ ಹತ್ತಬೇಕು. ಬದರಿಗೆ ಬರುವಾಗ ನಮಗೆ ಇನ್ನೆಲ್ಲಿಯೂ ಕಡಿದಾದ ದಾರಿ ಸಿಕ್ಕುವುದಿಲ್ಲ. ಈಗ ಮುಂದಿರುವುದು ಮಾತ್ರ ಸ್ವಲ್ಪ ಕಡಿದಾದ ದಾರಿ. ಆದರೂ ಕೇದಾರನಾಥ ತುಂಗನಾಥಕ್ಕೆ ಹೋಲಿಸಿದರೆ ನಮ್ಮ ಮುಂದಿರುವ ಚಡಾವು ಅಷ್ಟೇನೂ ಕಷ್ಟವಲ್ಲ.

ಮುಂದಕ್ಕೆ ಬದರಿಯ ವರೆವಿಗೂ ದೃಶ್ಯ ಅತಿ ಮನೋಹರವಾಗಿರುವುದು. ದಾರಿಯ ಎಡಬಲದಲ್ಲಿ ಇರುವ ಬೆಟ್ಟಗಳ ಮೇಲೆ ಹಿಮ ಬಗೆಬಗೆಯ ಆಕಾರ ತಾಳಿ ಕುಳಿತಿರುವುದು. ಬಿಸಿಲು ಅದರ ಮೇಲೆ ಬಿದ್ದಾಗ ಫಳಫಳನೆ ಹೊಳೆಯುತ್ತಿರುವುದು. ನಾವು ಅನೇಕ ಕಡೆ ಹಿಮದ ಮೇಲೆಯೇ ನಡೆದುಕೊಂಡು ಹೋಗಬೇಕಾಗುವುದು. ಹಿಮದ ಮೇಲೆ ನಡೆಯುವಾಗ ಸ್ವಲ್ಪ ಅಜಾಗರೂಕತೆಯಿಂದ ಜಾರಿಬಿದ್ದರೆ ಕೆಳಗೆ ಹರಿಯುವ ಅಳಕನಂದೆಯ ಪಾಲೆ. ಕೆಲವು ವೇಳೆ ಇಡೀ ಅಳಕನಂದಾ ನದಿ ಒಂದು ಕಡೆ ಹಿಮದಲ್ಲಿ ಮಾಯವಾಗಿ ಮತ್ತೊಂದು ಕಡೆಯಿಂದ ಹಿಮಗುಹೆಯಿಂದ ಭೋರ್ಗರೆದು ಹರಿಯುತ್ತಿರುವುದು. ಮೇಲೆ ಇರುವ ಹಿಮದ ಮೇಲೆ ನಾವು ಹೋಗುವೆವು. ನೂರಾರು ಜನ ನಿಂತರೂ ಆ ಹಿಮ ಒಡೆದುಹೋಗುವುದಿಲ್ಲ. ಅದು ಸುಮಾರು ಹದಿನೈದು ಇಪ್ಪತ್ತು ಅಡಿಗಳಷ್ಟು ದಪ್ಪನಾಗಿರುವುದು. ಇಂತಹ ಹಿಮದಲ್ಲಿ ಎರಡು ಕಡೆ ದೈತ್ಯ ಕಣ್ಣುಗಳಂತೆ ಹಿಮ ಕರಗಿತ್ತು. ಅವನ್ನು ತಮಾಷೆಗಾಗಿ "ವಿಶಾಲಾಕ್ಷಿ" ಎಂದು ಕರೆದೆ. ಹತ್ತಿರಿದ್ದವರು ಚೆನ್ನಾದ ಹೆಸರನ್ನೇ ನಾಮಕರಣ ಮಾಡಿದಿರಲ್ಲ ಎಂದರು. ಆ ಎರಡು ಕಣ್ಣಿನ ಕೆಳಗೆ ಅಳಕನಂದಾ ನದಿ ರಭಸದಿಂದ ಹರಿದು ಹೋಗುವುದನ್ನು ನೋಡ

ಬಹುದು. ಒಂದು ಕಡೆ ಹೋಗುವಾಗ ಬಿದ್ದ ದೊಡ್ಡ ಬಂಡೆಯಂತಹ ಹಿಮ ಇನ್ನೂ ಕರಗೇ ಇರಲಿಲ್ಲ. ರಸ್ತೆ ಆ ಹಿಮದ ಗುಹೆಯೊಳಗೆ ಕೆಲವು ದೂರ ಹೋಗುವುದು. ಒಂದು ಕಡೆ ಇಡೀ ಅಳಕನಂದಾ ನದಿಗೆ ಅಡ್ಡವಾಗಿ ಒಂದು ದೊಡ್ಡ ಬಂಡೆ ಮೇಲಿನಿಂದ ಉರುಳಿ ಬಂದು ಬಿದ್ದಿತ್ತು. ಆ ಪ್ರವಾಹ ಅದಕ್ಕೆ ಅಪ್ಪಳಿಸಿದಾಗ ವಿವಿಧ ಚಿತ್ರಗಳನ್ನು ನೀರು ಚಿತ್ರಿಸುತ್ತಿತ್ತು. ಇವೆಲ್ಲ ನೀರಿನಿಂದ ಮಾಡಿದ ಬಾಣ ಬಿರುಸುಗಳ ಪ್ರಯೋಗದಂತೆ ಇದ್ದವು. ನಾವು ಬೃಂದಾವನದಲ್ಲಿ ಮಾಡಿರುವ ಕೃತಕ ಚಿಲುಮೆಗಳನ್ನು ಬೆಪ್ಪು ಬೆರಗಾಗಿ ನೋಡುವೆವು. ಆದರೆ ಅಳಕನಂದಾ ನದಿ ಇಂತಹ ನೂರಾರು ರಚನೆಗಳನ್ನು ಮಾಡಿಕೊಂಡು ಹಿಮಾಲಯದ ಕಣಿವೆಯುದ್ದಕ್ಕೆ ಹರಿದು ಹೋಗುವುದು. ಹರಿಯ ಪಾದದೆಡೆಯಿಂದ ಹರಿದು ಬರುವ ಅಳಕನಂದೆಯ ನೃತ್ಯಭಂಗಿಯನ್ನು ನೋಡುವುದು ಕಣ್ಣಿಗೆ ಒಂದು ಹಬ್ಬ, ಅದರ ನಿನಾದ ಅಮರಗಾನದಂತಿದೆ. ಹಿಮಾಲಯದ ಪ್ರಕೃತಿ ಭಂಡಾರದಲ್ಲಿ ಇಂತಹ ಹಲವು ರಸಮಯ ದೃಶ್ಯಗಳಿವೆ. ಇವನ್ನು ನೋಡುತ್ತಿದ್ದರೆ ನಾವು ಈ ಪ್ರಪಂಚವನ್ನು ಮರೆಯುವೆವು.

ಸುಮಾರು ಮೂರು ಮೈಲಿ ಕಡಿದಾದ ಸ್ಥಳವನ್ನು ನಡೆದು ಸಾಕಾಗಿ ಏದುಸಿರಿನಿಂದ, ಎಂದು ಸಿಕ್ಕುವುದು ನಮ್ಮ ಪಯಣದ ಕೊನೆ ಎಂದು ಬರುತ್ತಿದ್ದಾಗ, ಕೆಲವು ಗಜಗಳ ಮುಂದೆ ಒಂದು ಬಾವುಟ ಹಾರಾಡುತ್ತಿರುವುದು ಕಾಣಿಸಿತು. ಅದರ ಹತ್ತಿರ ಹೋದಾಗ ಇದ್ದಕ್ಕೆ ಇದ್ದಂತೆಯೇ ದಿಣ್ಣೆ ಕೊನೆಗಾಣುವುದು, ನಮ್ಮ ಪೂರ್ವ ಸಂಸ್ಕಾರಗಳು ಭಗವಂತನ ದಯೆಯಿಂದ ಇದ್ದಕ್ಕೆ ಇದ್ದಂತೆಯೆ ಕೊನೆಗಂಡಂತೆ. ಈ ಸ್ಥಳವನ್ನು ದೇವದೇಖನಿ ಎನ್ನುವರು. ಅಲ್ಲಿಂದ ಒಂದು ಮೈಲಿ ದೂರದಲ್ಲಿ ವಿಶಾಲವಾದ ಬಯಲಿನಲ್ಲಿ ಬದರಿನಾಥಪುರಿ ಕಾಣುವುದು. ಊರಿನ ಮಧ್ಯದಲ್ಲಿ ದೇವಸ್ಥಾನದ ಗೋಪುರ ಕಂಡೊಡನೆಯೆ ಯಾತ್ರಿಕರು ನಿಂತು ನಮಸ್ಕಾರ ಮಾಡಿ "ಜೈ ಬದರೀನಾಥನಿಗೆ" ಎಂದು ಹರುಷದಿಂದ ಹೋಗುವರು. ನರ ನಾರಾಯಣ ಎಂಬ ಎರಡು ಹಿಮಾವೃತ ಶ್ರೇಣಿಗಳ ಮಧ್ಯದಲ್ಲಿ ಬದರೀನಾಥಪುರಿ ಒಂದು ವಿಶಾಲವಾದ ಬಯಲಿನಲ್ಲಿದೆ. ಅಷ್ಟೊಂದು ವಿಶಾಲವಾದ ಬಯಲನ್ನು ನಮ್ಮ ಪ್ರಯಾಣದಲ್ಲಿ ಮತ್ತೆಲ್ಲಿಯೂ ಕಾಣಲಿಲ್ಲ. ಅಲ್ಲಿ ಗಿಡಮರಗಳಾವುವೂ ಇಲ್ಲ. ವಿಶಾಲವಾದ ಬಯಲಲ್ಲಿ

ಹಸುರಾಗಿರುವ ಹುಲ್ಲುಗಾವಲಿದೆ. ಮಧ್ಯದಲ್ಲಿ ಅಳಕನಂದಾ ನದಿ ಹರಿಯುತ್ತಿರುವುದು. ನಮ್ಮ ಪಯಣದ ಕೊನೆ ಸಮಾಪಿಸಿತೆಂದು ದೂರದಲ್ಲಿ ಭಗವಂತನಿಗೆ ನಮಿಸಿದೆವು.

ಅಲ್ಲಿ ಪಂಡನೊಬ್ಬ ಬದರಿ ಚಿತ್ರವನ್ನು ಇಟ್ಟು ಪೂಜಿಸುತ್ತಿರುವನು. ಬದರಿ ಮಹಾಕ್ಷೇತ್ರಕ್ಕೆ ಕಾಲಿಡುತ್ತಿರುವಿರಿ, ತೀರ್ಥಪ್ರಸಾದ ತೆಗೆದುಕೊಂಡು ಹೋಗಿ ಎಂದು ಕೂಗುತ್ತಿದ್ದ. ಅವನು ಮಂತ್ರ ಏನು ಹೇಳುತ್ತಾನೊ ಅದನ್ನು ಕೇಳೋಣ ಎಂದು ನಮ್ಮ ಜೊತೆಯವರಿಗೆ ಅವನಿಗೆ ಮೂರು ಕಾಸು ಕೊಟ್ಟು ತೀರ್ಥ ತೆಗೆದುಕೊಳ್ಳಿ ಎಂದೆ. ಅವರು ತೀರ್ಥ ಕೊಡುವಾಗ, "ಅಕಾಲಮರಣದಿಂದ ಪಾರಾಗಿ ದೀರ್ಘಾಯುಷಿಗಳಾಗಿ ಇಹದಲ್ಲಿ ಸುಖಸಂತೋಷ ಅನುಭವಿಸಿ ಮತ್ತು ಮರಣಾನಂತರ ಪುನರ್ಜನ್ಮವಿಲ್ಲ" ಎಂದು ಅರ್ಥಕೊಡುವ ಮಂತ್ರ ಹೇಳುವರು. ಇಲ್ಲಿ ಎಲ್ಲ ಪಂಡರ ಬಾಯಲ್ಲೂ ಇದೇ ಮಂತ್ರ. ಇವರಿಗೆ ಹುಟ್ಟುವ ಮಗು ಕೂಡ ಪ್ರಪಂಚಕ್ಕೆ ಬರುವಾಗಲೇ ಈ ಮಂತ್ರವನ್ನು ಜಪಿಸುತ್ತಲೆ ಬರುತ್ತದೆ ಎಂದು ಕಾಣುವುದು. ಈ ಒಂದು ಮಂತ್ರ ಗೊತ್ತಿದ್ದರೆ ವರುಷಕ್ಕೆ ಆರು ತಿಂಗಳ ಜೀವನೋಪಾಯಕ್ಕೆ ಯಾವ ಆತಂಕವೂ ಇಲ್ಲ. ನಮ್ಮ ಜನ ದೇವರು ಧರ್ಮದ ಹೆಸರಿನಲ್ಲಿ ಕಾಸು ಬಿಚ್ಚುತ್ತಾರೆ. ಸ್ವಲ್ಪ ಆಲೋಚನೆ ಮಾಡಿದರೆ ಪುನರ್ಜನ್ಮವಿಲ್ಲ ಎಂದು ಈ ಮಂತ್ರ ಕೊನೆಗೆ ಸಾರುವುದರಿಂದ ಒಂದೇ ಸಲಿ ಮುಕ್ತಿ ಪ್ರಾಪ್ತಿಯಾಗಿ ನಮ್ಮ ಸ್ವರ್ಗಸುಖಕ್ಕೆಲ್ಲ ತಿಲತರ್ಪಣ ಕೊಟ್ಟಂತೆಯೆ!

ನಾವೀಗ ಘಂಟಾಕರ್ಣನ ಅಧೀನಕ್ಕೆ ಒಳಪಟ್ಟಿರುವೆವು. ಆತನೇ ಬದರೀಪುರಿಗೆ ಕೊತ್ವಾಲನಂತೆ. ಹಿಂದೆ ಹರಿಯ ಹೆಸರನ್ನು ಕೇಳಕೂಡದೆಂದು ಕಿವಿಗೆ ಗಂಟೆ ಕಟ್ಟಿಕೊಂಡಿದ್ದಾತ, ಹರಿಯ ಊರನ್ನೇ ಈಗ ಹಗಲಿರುಳು ಕಾಯುತ್ತ, ದಿನ ಬೆಳಗಾದರೆ ಅವನ ಹೆಸರನ್ನು ಕೇಳುತ್ತ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಯಿತು!



ಬದರೀನಾಥ

೧೭

## ಬದರೀನಾಥ

ಬದರೀನಾಥಪುರಿ ಮೂರು ಮೈಲಿ ಉದ್ದ ಒಂದು ಮೈಲಿ ಅಗಲವಿರುವ ಬಯಲಿನಲ್ಲಿದೆ. ಬಯಲಿನಲ್ಲಿ ಒಂದು ಕಡೆ ನರ ಎಂಬ ಪರ್ವತ ಮತ್ತೊಂದು ಕಡೆ ನಾರಾಯಣ ಎಂಬ ಪರ್ವತವಿದೆ. ಊರಿನ ರಕ್ಷಕರಂತೆ ಆ ಪರ್ವತಗಳಿವೆ. ಇವಲ್ಲದೆ ಅದರ ಹಿಂದೆ ಮತ್ತು ಸುತ್ತಲೂ ದೊಡ್ಡ ದೊಡ್ಡ ಹಿಮಾವೃತ ಪರ್ವತಗಳಿವೆ. ಕೇದಾರನಾಥದಷ್ಟು ಇಲ್ಲಿ ಚಳಿಯಾಗುವುದಿಲ್ಲ. ಇದು ಅದರಷ್ಟು ಎತ್ತರವೂ ಇಲ್ಲ. ಕೇವಲ ೧೦,೫೫೦ ಅಡಿ ಮಾತ್ರ. ಹಿಮಾವೃತಪರ್ವತಗಳು ಕೂಡ ಹತ್ತಿರದಲ್ಲಿ ಇಲ್ಲ, ಸ್ವಲ್ಪ ದೂರದಲ್ಲಿವೆ. ದೂರದಿಂದ ನೋಡಿದರೆ ಇದೊಂದು ಸಣ್ಣ ನಗರಿಯಂತೆಯೇ ಕಾಣುವುದು. ನಾವು ಶ್ರೀನಗರವನ್ನು ಬಿಟ್ಟಾದ ಮೇಲೆ ಸಿಕ್ಕುವ ದೊಡ್ಡ ಊರು ಇದೇ ಎನ್ನಬಹುದು. ಈ ಊರಿನಲ್ಲಿ ಟೆಲಿಫೋನ್ ಪೋಸ್ಟ್ ಆಫೀಸ್, ಆಸ್ಪತ್ರೆ, ಸಣ್ಣ ಸ್ಕೂಲು, ಪೋಲೀಸ್ ಸ್ಟೇಷನ್ ಎಲ್ಲಾ ಇವೆ. ಊರಿಗೆ ಪ್ರವೇಶ ಮಾಡುವುದಕ್ಕೆ ಮುಂಚೆ ರಸ್ತೆಯ ಪಕ್ಕದಲ್ಲಿರುವ ಒಂದು ದೊಡ್ಡ ಪುಸ್ತಕದಲ್ಲಿ ಯಾತ್ರಿಕರು ಎಷ್ಟು ಜನ, ಯಾವ ಊರಿನಿಂದ ಬಂದಿರುವರು ಎಂಬುದನ್ನು ಬರೆಯಬೇಕು. ಊರಿನ ಮಧ್ಯದಲ್ಲಿರುವ ಮುಖ್ಯ ಬೀದಿಯಲ್ಲಿ ಹೋಗುತ್ತಿದ್ದರೆ ಹರಿದ್ವಾರದ ಮುಖ್ಯ ಬೀದಿಯೊಂದರಲ್ಲಿ ಹೋಗುತ್ತಿರುವೆವೊ ಎಂದೂ ತೋರುವುದು. ಎಲ್ಲಾ ಬಗೆಯ ಅಂಗಡಿಗಳಿವೆ. ಬಟ್ಟೆ ಅಂಗಡಿ, ಚಿತ್ರಪಟಗಳನ್ನು ಮಾರುವ ಅಂಗಡಿ, ಟಿಬೆಟ್ ವ ಎಂತಾದ ಕಡೆಗಳಿಂದ ಬರುವ ಜಿಂಕೆ ಮುಂತಾದ ಪ್ರಾಣಿಗಳ ಚರ್ಮದ ಅಂಗಡಿ, ಶಿಲಾಜಿತ್ ಅಂಗಡಿ

ದವಸಧಾನ್ಯಗಳ ಅಂಗಡಿ ಬೇಕಾದಷ್ಟು ಇದ್ದವು. ಎಲ್ಲಕ್ಕಿಂತ ಹೆಚ್ಚಾಗಿ ನಮ್ಮನ್ನು ತಾತ್ಕಾಲಿಕವಾಗಿ ಆಕರ್ಷಿಸಿದ್ದು ಎಲ್ಲಾ ಬಗೆಯ ತಿಂಡಿಯನ್ನು ಮಾಡಿಟ್ಟ ಹೊಟೇಲುಗಳು. ಇಲ್ಲಿ ನೊಣದ ಕಾಟವಿಲ್ಲ. ಈ ಎತ್ತರದಲ್ಲಿ ಅವು ಬಾಳಲಾರವು ಎಂದು ಕಾಣುವುದು. ದೇವಸ್ಥಾನದ ಸಮೀಪದಲ್ಲಿರುವ ಕಾಳಿಕಂಬ್ಲಿವಾಲ ಧರ್ಮಶಾಲೆಯಲ್ಲಿ ತಂಗಿದೆವು. ಚೆನ್ನಾಗಿರುವ ಸ್ಥಳವೇ ಸಿಕ್ಕಿತು. ಛಾವಣಿಯ ಕೆಳಗೆ ಹಲಗೆ ಹಾಕಿ ಮುಚ್ಚಿದ್ದರು. ಇಲ್ಲಿ ಯಾತ್ರಿಕರಿಗೆ ಇಳಿದುಕೊಳ್ಳುವುದಕ್ಕೆ ಬೇಕಾದಷ್ಟು ಸ್ಥಳಗಳಿವೆ. ಕಾಳಿಕಂಬ್ಲಿವಾಲ ಧರ್ಮಶಾಲೆಗಳೇ ಮೂರು ನಾಲ್ಕು ಕಡೆ ಇವೆ. ಅದರಲ್ಲೆ ಸುಮಾರು ನೂರೈವತ್ತು ಮಂದಿಗಿಂತ ಹೆಚ್ಚು ಜನರಿರಬಹುದು. ಯಾತ್ರಿಕರಿಗಾಗಿ ದೇವಸ್ಥಾನದ ಸುತ್ತಲೂ ಬೇರೆ ಮನೆ ಕಟ್ಟಿರುವರು. ಇದಲ್ಲದೆ ಪಂಡರು ಬೇರೆ ತಮ್ಮ ತಮ್ಮ ಮನೆಗಳಲ್ಲಿ ಯಾತ್ರಿಕರನ್ನು ಇಟ್ಟುಕೊಳ್ಳುವರು. ಸುಮಾರು ದಿನಕ್ಕೆ ಎರಡು ಸಾವಿರ ಯಾತ್ರಿಕರು ಇಲ್ಲಿ ನಿರಾತಂಕವಾಗಿ ತಂಗುವುದಕ್ಕೆ ಅವಕಾಶವಿದೆ.

ಧರ್ಮಶಾಲೆಯಲ್ಲಿ ಸಾಮಾನನ್ನು ಇಳಿಸಿದೊಡನೆಯೆ ಕೆಲವರು ತಮ್ಮ ಹೆಸರಿಗೇನಾದರೂ ಕಾಗದ ಬಂದಿದೆಯೇ ಎಂದು ಪೋಸ್ಟ್ ಆಫೀಸಿನಲ್ಲಿ ವಿಚಾರಿಸಲು ಹೋದರು. ತಾವು ಹಿಂದಿನ ಊರಿನಿಂದ ಹೊರಡುವಾಗ ಬಹುಶಃ ಇಂತಹ ದಿನ ಬದರಿಯಲ್ಲಿ ಇರುವೆವು ಅಲ್ಲಿಗೆ ಕಾಗದ ಬರೆಯಿರಿ ಎಂದು ತಿಳಿಸಿದ್ದರು. ಆದರೆ ಸ್ವಲ್ಪ ವ್ಯತ್ಯಾಸವಾಗಿ ನಾವು ಒಂದೆರಡು ದಿನ ಮುಂಚೆಯೇ ಬದರಿಗೆ ಬಂದಿದ್ದೆವು. ಇನ್ನೂ ಕಾಗದ ಬಂದಿರಲಿಲ್ಲ. ಹಿಂದೆ ಕೇದಾರದಲ್ಲಿ ವಿಚಾರಿಸಿದಾಗಲೂ ಕಾಗದ ಬಂದಿರಲಿಲ್ಲ. ಅಲ್ಲಿಯ ಪೋಸ್ಟ್ ಮಾಸ್ಟರಿಗೆ ಕಾಗದ ಬಂದರೆ ಬದರಿಗೆ ಕಳುಹಿಸಿ ಎಂದು ತಿಳಿಸಿದ್ದರು. ಮೈಸೂರಿನಿಂದ ಬರುವ ಕಾಗದ ನಮ್ಮ ಹಿಂದೆ ಹಿಂದೆಯೇ ಬರುತ್ತಿತ್ತು. ನಾವು ಯಾತ್ರೆ ಪೂರೈಸಿಕೊಂಡು ಮೈಸೂರಿಗೆ ಬಂದ ಮೇಲೆ ಆ ಪತ್ರಗಳೂ ಪುನಃ ಇಲ್ಲಿಗೇ ಬಂದು ತಲುಪಿದವು. ಆ ಪತ್ರದ ಮೇಲೆ ಕೇದಾರ ಬದರೀ ಮುದ್ರೆಗಳು ಬಿದ್ದಿದ್ದುವು. ನಮ್ಮಲ್ಲಿ ಕೆಲವರು ಮಾಡುವ ತೀರ್ಥಯಾತ್ರೆಯೂ ಹೀಗೆಯೆ. ಮೇಲೆ ಮಾತ್ರ ಮುದ್ರೆ, ಒಳಗೆ ಯಾವ ಪರಿಣಾಮವೂ ಆಗಿರುವುದಿಲ್ಲ.

ಹಿಂದಿನ ದಿನ ಹಿಮದಂತೆ ಕೊರೆಯುವ ನೀರಿನಲ್ಲಿ ಸ್ನಾನ ಮಾಡದೆ

ಇದ್ದೆವು. ಇಂದು ಮೊದಲು ಸ್ನಾನ ಮಾಡಿ ಪ್ರಥಮ ದೇವರ ದರ್ಶನ ಮಾಡಿ ಕೊಂಡು ಬರುವ ಎಂದು ಹೊರಟೆವು. ಇಲ್ಲಿಂದ ಸುಮಾರು ಎಪ್ಪತ್ತು ಎಂಭತ್ತು ಗಜ ದೂರದಲ್ಲಿ ದೇವಸ್ಥಾನದ ಕೆಳಗೆ ಅಳಕನಂದಾ ನದಿಯ ಮೇಲೆ ತಪ್ತ ಕುಂಡವೆಂಬ ಬಿಸಿನೀರಿನ ಕೊಳವಿದೆ. ಅಲ್ಲಿ ಸ್ನಾನ ಮಾಡುವುದಕ್ಕೆ ಬಹಳ ಹಿತಕರವಾಗಿರುವುದು. ನೀರು ಕುದಿಯುತ್ತ ಅಲ್ಲಿಗೆ ಬಂದು ಬೀಳುವುದು. ಆ ಕೊಳ ವಿಶಾಲವಾಗಿರುವುದರಿಂದ ಬಿಸಿ ಅಷ್ಟು ಇರುವುದಿಲ್ಲ. ನಾವು ನೀರಿನಲ್ಲಿ ಇಳಿದು ಸ್ನಾನ ಮಾಡಬಹುದು. ಕೇದಾರನಾಥದಲ್ಲಿ ದೊರಕದ ಒಂದು ಅಪೂರ್ವ ಅನುಕೂಲ ಇದು. ಆ ಬಿಸಿನೀರು ನೆಲದಿಂದ ಬರುತ್ತಿರುವ ಕಡೆಯಂತೂ ಆವಿ ಯಿಂದ ಕುದಿಯುತ್ತಿರುವುದು. ಒಂದು ಬಟ್ಟೆಯಲ್ಲಿ ಅಕ್ಕಿಯನ್ನು ಕಟ್ಟಿಹಾಕಿದರೆ ಸ್ವಲ್ಪ ಹೊತ್ತಿನಲ್ಲಿ ಅನ್ನವಾಗುವುದು. ಅದರ ಹತ್ತಿರವೇ ಬಿಸಿನೀರು ಮತ್ತೊಂದು ಸಣ್ಣ ಕೊಳಕ್ಕೆ ಬಂದು ಬೀಳುವುದು. ಇದನ್ನು ಸೂರ್ಯಕುಂಡ ಎನ್ನುವರು. ಇದರಲ್ಲಿರುವ ನೀರು ಮೊದಲನೆಯ ಕುಂಡಕ್ಕಿಂತ ಸ್ವಲ್ಪ ಹೆಚ್ಚು ಬಿಸಿ. ಆದರೂ ಸ್ನಾನಕ್ಕೆ ಚೆನ್ನಾಗಿರುವುದು. ಬರೀ ದಿಣ್ಣೆಯನ್ನು ಹತ್ತಿಕೊಂಡು ಬಂದಾದ ಮೇಲೆ ಮೈಯೆಲ್ಲ ನೋಯುತ್ತಿತ್ತು. ಹಾಯಾಗಿ ಬಿಸಿನೀರಿನಲ್ಲಿ ಬಹಳ ಹೊತ್ತು ಕುಳಿತುಕೊಂಡಿದ್ದೆ. ಅದೊಂದು ಸ್ವರ್ಗಸುಖ ನೋಯುತ್ತಿರುವ ದೇಹಕ್ಕೆ. ಅಲ್ಲಿಂದ ಎದ್ದು ಬಂದ ಮೇಲೆ ಮೈಕೈ ನೋವೆಲ್ಲ ಮಾಯವಾಗಿತ್ತು. ಈ ಕೊಳದಿಂದ ನೀರು ಅಳಕನಂದಾನದಿಗೆ ಕೆಳಗೆ ಹರಿದುಕೊಂಡು ಹೋಗುವುದು. ಸೂರ್ಯಕುಂಡದಿಂದ ಕೆಲವು ಮೆಟ್ಟಲು ಕೆಳಗೆ ಇಳಿದು ಬಂದರೆ ಅಳಕನಂದೆಯಲ್ಲಿ ಒಂದು ಭಾಗವನ್ನು ನಾರದ ಕುಂಡವೆನ್ನುವರು. ಅದರಲ್ಲಿ ಸ್ನಾನಮಾಡಬೇಕು ಎಂದು ಹತ್ತಿರ ಇರುವ ಪಂಡರು ಹೇಳುವರು. ಆದರೆ ಅದರ ನೀರನ್ನು ಮುಟ್ಟಿ ದರೇ ಕೈ ಬೆಂಡಿನಂತೆ ಆಗುವುದು. ಪಂಡರ ಮಾತನ್ನು ಯಾರೂ ಕಿವಿಗೇ ಹಾಕಿಕೊಳ್ಳುವುದಿಲ್ಲ. ದೂರದಿಂದಲೇ ಅದಕ್ಕೆ ನಮಸ್ಕಾರ ಹಾಕಿ ಬಿಸಿನೀರಿ ನೊಳಕ್ಕೆ ಬೀಳುವರು. ಸ್ವಲ್ಪ ಭಕ್ತ್ಯಾತಿಶಯವಿದ್ದವರು ಮಾತ್ರ ಅದರ ನೀರನ್ನು ಸ್ವಲ್ಪ ತಲೆಗೆ ಪ್ರೋಕ್ಷಣೆ ಮಾಡಿಕೊಂಡು ಹೋಗುವರು.

ತಪ್ತಕುಂಡಕ್ಕೆ ಬಿಸಿನೀರು ನೆಲದೊಳಗಿನಿಂದ ಸಾವಿರಾರು ವರುಷಗಳಿಂದ ಹರಿದು ಬರುತ್ತಿದೆ. ಈ ಶೀತದೇಶದಲ್ಲಿ ಪ್ರಕೃತಿ ಯಾತ್ರಿಕರಿಗೆ ಕೊಟ್ಟ ಒಂದು

ದೊಡ್ಡ ವರ ಇದು. ಈ ಊರು ಅಷ್ಟು ದೊಡ್ಡದಾಗಿ ಬೆಳೆದಿರುವುದಕ್ಕೆ ಈ ಬಿಸಿ ನೀರಿನ ಕೊಳ ಎಷ್ಟೋ ಮುಖ್ಯವಾಗಿದೆ. ಯಾರೂ ಸ್ನಾನದ ನೀರು ಕಾಯಿಸಲು ಕಟ್ಟಿಗೆಗೆ ಖರ್ಚು ಮಾಡಬೇಕಾಗಿಲ್ಲ. ಈ ನೀರನ್ನು ಕುಡಿಯುವುದಕ್ಕೆ ಆಗುವು ದಿಲ್ಲ. ಸ್ವಲ್ಪ ಉಪ್ಪು ಮತ್ತು ಗಂಧಕ ಬೆರೆತಿದೆ. ಚರ್ಮ ವ್ಯಾಧಿಯವರಿಗೆ ಇದು ಒಳ್ಳೆಯದೆಂದು ಹೇಳುವರು. ಆದರೆ ಆ ಕುಂಡದ ನೀರನ್ನು ಈಗ ಪಾಪವಿಮೋಚ ನೆಗೆ ಮಾತ್ರ ಉಪಯೋಗಿಸುತ್ತಿರುವರೇ ವಿನಃ ಔಷಧವಾಗಿ ಅಲ್ಲ.

ಬದರೀನಾಥದ ತಪ್ತಕುಂಡದಿಂದ ಇಪ್ಪತ್ತು ಇಪ್ಪತ್ತೈದು ಮೆಟ್ಟಲು ಹತ್ತಿ ಬಂದರೆ ಬದರೀನಾಥದ ಬೃಹತ್ ದ್ವಾರ ಕಾಣಿಸುವುದು. ಅದು ನಮ್ಮ ಅರಮನೆಗೆ ಕೋಟೆಯೊಳಗಿನಿಂದ ಬರುವ ದ್ವಾರದಂತೆ ಇದೆ. ದೇವಸ್ಥಾನದ ಮುಂದೆ ಭಿಕ್ಷುಕರ ಸಾಲು ಕುಳಿತಿದೆ. ಆ ಭಿಕ್ಷುಕರಲ್ಲಿ ತಮಿಳು ತೆಲಗು ಮಳಯಾಲಿ ಬಲ್ಲವರು ಹಲವರು ಇರುವರು. ಭಿಕ್ಷುಕರೆಲ್ಲ ಕಾವಿ ಧರಿಸಿ ಸನ್ಯಾಸಿ ಗಳಾಗಿರುವರು. ಅವರಿಗೆ ಊಟವನ್ನು ಧರ್ಮಶಾಲೆಯಿಂದ ಒದಗಿಸುತ್ತಾರೆ. ಯಾತ್ರಿಕರು ದಕ್ಷಿಣೆ ಕೊಡುವರು. ಸುಮ್ಮನೆ ಆರು ತಿಂಗಳು ದೇವಸ್ಥಾನದ ಮುಂದೆ ಕುಳಿತು ಉಳಿದ ಆರು ತಿಂಗಳು ಜೀವನೋಪಾಯಕ್ಕೆ ಸಂಪಾದಿ ಸುವರು.

ಒಬ್ಬ ಫೋಟೋಗ್ರಾಫರ್ ಜೇರೆ ದೇವಸ್ಥಾನದ ಬಾಗಿಲ ಹತ್ತಿರವೇ ಇರುವನು. ದೇವಸ್ಥಾನದ ಮುಂದೆ ನಿಂತಿದ್ದನ್ನು ಬೇಕಾದರೆ ಫೋಟೋ ತೆಗೆದುಕೊಡುವನು. ಅನೇಕಜನ ಫೋಟೋ ತೆಗೆಸಿಕೊಳ್ಳುವರು. ನಾಳೆ ಊರಿಗೆ ಹೋದಾಗ ಫೋಟೋ ಬದರಿಗೆ ಹೋಗಿದ್ದಕ್ಕೆ ಗುರ್ತು. ನಾವು ದೇವಸ್ಥಾನದ ಹೆಬ್ಬಾಗಿಲನ್ನು ಹತ್ತಿ ಹೋದರೆ ಎಡಗಡೆ ದೊಡ್ಡ ಪ್ರಾಂಗಣಗಳಿವೆ. ಅಲ್ಲಿ ಭಜನೆ ಮಾಡುವರು. ಒಂದಲ್ಲ ಒಂದು ಗುಂಪಿನವರು ಯಾವಾಗಲೂ ಭಜನೆ ಮಾಡು ತ್ತಲೇ ಇರುವರು. ತಾಳವನ್ನು ಹಾಕಿಕೊಂಡು ಅನೇಕ ಜನ ನೃತ್ಯ ಮಾಡುತ್ತಾ ಭಗವಂತನ ನಾಮವನ್ನು ಆನಂದದಿಂದ ಪಠಿಸುತ್ತಿರುವರು. ಕೆಲವು ವೇಳೆ ಭಾವ ಪರವಶರಾಗಿ ಕೆಳಗೆ ಬೀಳುವುದೂ ಉಂಟು. ಅಲ್ಲಿಂದ ಮುಂದೆ ಬಂದರೆ ಮುಖ್ಯ ದೇವಸ್ಥಾನಕ್ಕೆ ಹೋಗುವ ಬಾಗಿಲ ಮುಂದಿರುವ ಪ್ರಾಂಗಣಕ್ಕೆ ಬರುವೆವು.

ಜನ ಆಗಲೇ ಅಲ್ಲಿ ಕಿಕ್ಕಿರಿದು ನಿಂತಿದ್ದರು. ಒಂದೊಂದು ಸಲಿಗೆ ಇಪ್ಪತ್ತು ಮೂವತ್ತು ಜನರಂತೆ ಒಳಗೆ ಬಿಡುತ್ತಿದ್ದರು. ಬಾಗಿಲು ಮುಚ್ಚುವ ಸಮಯ, ನೂಕುನುಗ್ಗಲು. ನಮ್ಮ ಸರದಿ ಬಂದಾಗ ಒಳಗೆ ಹೋದೆವು. ಅಲ್ಲಿಂದ ಬದರೀ ನಾಥನ ವಿಗ್ರಹ ಸುಮಾರು ಐವತ್ತು ಅಡಿಗಳ ದೂರದಲ್ಲಿದೆ. ಸುಮಾರು ಎರಡು ಅಡಿ ಎತ್ತರದ ಧ್ಯಾನಮಗ್ನ ಮೂರ್ತಿ ದೀಪದ ಬೆಳಕಿನಲ್ಲಿ ಕಂಗೊಳಿಸುತ್ತದೆ. ಮಂಗಳಾರತಿ ಆದಮೇಲೆ ಪ್ರಸಾದ ತೆಗೆದುಕೊಂಡು ಹೊರಟೆವು. ನಾವು ಬಂದದ್ದು ಬದರೀನಾಥನಿಗೆ ನಾವು ಬಂದಿರುವೆವು ಎಂದು ವರದಿ ಒಪ್ಪಿಸುವುದಕ್ಕೆ ಮಾತ್ರ. ಬರುವಾಗ ಹೊರಗಡೆ ದೇವಸ್ಥಾನಕ್ಕೆ ಬಲಗಡೆಯಲ್ಲಿ ಶ್ರೀ ಲಕ್ಷ್ಮಿಯ ವಿಗ್ರಹ ಇದೆ. ಅಲ್ಲಿ ಜನಸಂದಣಿ ಅಷ್ಟು ಇಲ್ಲ. ಆ ಮಹಾತಾಯಿಗೆ ಅಡ್ಡಬಿದ್ದು ನಾವು ಬಿಡಾರ ಮಾಡಿದ ಸ್ಥಳಕ್ಕೆ ಬಂದೆವು.

ಹಿಂದಿನ ಕಾಲದಲ್ಲಿ ಸಹಸ್ರಕವಚ ಎಂಬ ರಾಕ್ಷಸ ಬಹಳ ತೊಂದರೆ ಕೊಡುತ್ತಿದ್ದನಂತೆ. ಅವನ ಕಾಟವನ್ನು ತಾಳಲಾರದೆ ಜನ ವಿಷ್ಣುವಿಗೆ ಮೊರೆ ಯಿಡಲು ತಾನೇ ಭೂಮಿಯಲ್ಲಿ ಅವತರಿಸಿ ಅವನನ್ನು ವಧಿಸುತ್ತೇನೆ ಎಂದು ಭರವಸೆ ಕೊಟ್ಟು ಕಳುಹಿಸಿದನು. ಅನಂತರ ನಾರಾಯಣ ತನ್ನ ಪ್ರಿಯ ಸ್ನೇಹಿತ ನರನೊಡನೆ ಬಂದು ಬದರಿಯಲ್ಲಿ ತಪಸ್ಸುಮಾಡಿ ಸಹಸ್ರಕವಚನನ್ನು ಧ್ವಂಸ ಮಾಡಿದನಂತೆ. ನಮ್ಮಲ್ಲಿ ಶಸ್ತ್ರಾಸ್ತ್ರಗಳಬಲಕ್ಕಿಂತ ತಪೋಬಲವೇ ಹೆಚ್ಚು. ಒಬ್ಬನನ್ನು ಧ್ವಂಸಮಾಡಬೇಕಾದರೆ, ಪ್ರಕೃತಿಯ ಬೊಕ್ಕಸವನ್ನು ಒಡೆಯ ಬೇಕಾದರೆ, ಎಲ್ಲಕ್ಕೂ ತಪಸ್ಸೇ ಮೂಲ. ರಾವಣ, ಹಿರಣ್ಯಾಕ್ಷ. ಹಿರಣ್ಯಕಶಿಪು ಗಳೂ ಕೂಡ ಮುಂಚೆ ತಪಸ್ಸು ಮಾಡಿ ಶಕ್ತಿಪಡೆದು ಅನಂತರ ಲೋಕಕಂಟಕ ರಾದರು. ಬ್ರಹ್ಮ ಸೃಷ್ಟಿಮಾಡುವುದಕ್ಕೆ ಮುಂಚೆ ತಪಸ್ಸು ಮಾಡಿ ಅನಂತರ ಸೃಷ್ಟಿಯನ್ನು ಪ್ರಾರಂಭ ಮಾಡಿದ ಎನ್ನುವರು. ಶಸ್ತ್ರಾಸ್ತ್ರಗಳ ತರಬೇತು ಗೌಣ, ತಪಸ್ಸೇ ಮುಖ್ಯ.

ಬದರಿಕಾಶ್ರಮವನ್ನು ನಾರದಕ್ಷೇತ್ರವೆನ್ನುವರು. ಬದರಿ ದೇವಸ್ಥಾನದಲ್ಲಿ ನಾರದ ಮತ್ತು ಉದ್ಧವನ ವಿಗ್ರಹಗಳು ಇವೆ. ನಾರದ ತನ್ನ ವಿಷ್ಣುಪಂಚ ರಾತ್ರಾಗಮವನ್ನು ಜಾರಿಗೆ ತಂದುದು ಇಲ್ಲೇ ಎನ್ನುವರು. ಪಂಚರಾತ್ರಾಗಮದ

ಆರಾಧ್ಯದೇವತೆಯೇ ನಾರಾಯಣ. ಇಡೀ ಹಿಮಾಲಯ ಕ್ಷೇತ್ರ ನಾರದ ಮಹರ್ಷಿಗಳ ತಪಸ್ಸಿನಿಂದ ಓತಪ್ರೋತವಾಗಿದೆ ಎನ್ನುವರು. ಬದರಿಯ ದೇವ ಸ್ಥಾನವನ್ನು ಚಳಿಗಾಲದ ಆರುತಿಂಗಳಲ್ಲಿ ಮುಚ್ಚುವಾಗ ನಾರದರೆ ಅಲ್ಲಿಯ ಪೂಜೆಯನ್ನು ಮಾಡುತ್ತ ಇರುವರಂತೆ. ನಮ್ಮ ಪುರಾಣದ ಪ್ರಕಾರ ಇಡೀ ಮಾನವಕೋಟಿಯ ಮೂಲಪುರುಷನಾದ ಮನುವನ್ನು ಮತ್ಸ್ಯಾವತಾರಮಾಡಿದ ವಿಷ್ಣು ಇಲ್ಲಿ ತಂದು ಬಿಟ್ಟನಂತೆ. ಅವನು ಸಪ್ತಋಷಿಗಳನ್ನು ಕರೆತಂದನು. ಅವರು ಪ್ರಪಂಚದಲ್ಲಿ ಪ್ರಜೋತ್ಪತ್ತಿ ಕಾರ್ಯಕ್ಕೆ ಪ್ರಾರಂಭಿಸಿದರು. ಅಂದಿನಿಂದ ನಮ್ಮ ಸೃಷ್ಟಿಯಾಟ ಪ್ರಾರಂಭವಾಯಿತು. ನಮ್ಮ ಅಳುನಗು, ಆಶೆನಿರಾಶೆ, ಪ್ರೇಮದ್ವೇಷಗಳ ಲೀಲೆ ಪ್ರಾರಂಭವಾಯಿತು. ಆಟ ಶುರುಮಾಡಿಬಿಟ್ಟು ನಿಸ್ಸಂಗರಾಗಿ ಆ ಸಪ್ತ ಋಷಿಗಳು ನಮ್ಮಾಟವನ್ನು ನೋಡುತ್ತ ಉತ್ತರಧೃವದಲ್ಲಿ ತಾರೆಗಳಂತೆ ನೆಲೆಸಿರುವರು! ನಮ್ಮಾಟ ಎಂತಹ ಒಂದು ಕಾಟಕ್ಕೆ ಬಂದಿದೆ ಎಂಬುದು ರಾತ್ರಿಹೊತ್ತು ಅವರು ನೋಡುವಾಗ ಎಲ್ಲಾ ವ್ಯಕ್ತವಾಗುವುದು. ಈ ನರಲೀಲೆಯ ದಾಂಧಲೆಗೆಲ್ಲ ಅವರೇ ಮೂಲಪುರುಷರು.

ಪೌರಾಣಿಕ ದೃಷ್ಟಿಯಲ್ಲಿ ಬದರಿಯೇ ನಮ್ಮ ಜನಾಂಗದ ತೊಟ್ಟಿಲು, ಬಾಲ್ಯದ ಲೀಲಾಭೂಮಿ ಎನ್ನುವರು. ಆದರೆ ಭೂಗರ್ಭ ಶಾಸ್ತ್ರಜ್ಞರು ಬಂದು ಹಿಮಾಲಯ ನೀವು ಊಹಿಸುವಷ್ಟು ಪುರಾತನ ಬೆಟ್ಟವಲ್ಲ. ನಮ್ಮ ಚಾಮುಂಡಿ ಬೆಟ್ಟಕ್ಕಿಂತ ವಯಸ್ಸಿನಲ್ಲಿ ಕಡಿಮೆ ಎನ್ನುವರು. ನಮ್ಮ ಚಾಮುಂಡಿ ಬೆಟ್ಟ ಮತ್ತೂ ದಕ್ಷಿಣದ ಇತರ ಕಡೆಗಳು ಭೂಮಿಯಮೇಲೆ ಇದ್ದಾಗ ಹಿಮಾಲಯವೆಲ್ಲ ನೀರಿನಲ್ಲಿ ಮುಳುಗಿತ್ತು ಎನ್ನುವರು. ಸಂಸ್ಕೃತಿ ಇಲ್ಲಿ ಮೊದಲಾಯಿತು ಎನ್ನುವರು. ಆದರೆ ನಮ್ಮ ಪುರಾಣವನ್ನು ಅಷ್ಟು ಸುಲಭವಾಗಿ ಸೋಲಿಸುವುದಕ್ಕೆ ಆಗುವು ದಿಲ್ಲ- ಸೃಷ್ಟಿ ಮೊದಲಾಯಿತು ಎಂದರೆ ಏನರ್ಥ? ಹಿಂದೆ ಏನೂ ಇರಲಿಲ್ಲ. ಈಗ ತಾನೆ ಎಲ್ಲಾ ಪ್ರಾರಂಭವಾಯಿತು ಎಂದು ಅರ್ಥವಲ್ಲ. ಹಿಂದೆಯೂ ಇತ್ತು, ಅದು ಕಾಲವಶಕ್ಕೆ ಸಿಕ್ಕಿ ನಾಶವಾಯಿತು ಇನ್ನೊಂದು ಕಲ್ಪದಲ್ಲಿ ಜೀವ ಮತ್ತೆಲ್ಲಿಂದಲೋ ಪ್ರಾರಂಭವಾಗುವುದು. ಯಾವಾಗಲೂ ಒಂದೇ ಕಡೆಯಿಂದಲೇ ಏತಕ್ಕೆ ಪ್ರಾರಂಭವಾಗಬೇಕು? ಈಗಿನ ರಾಷ್ಟ್ರಗಳು Hydrogen Bomb, Cobalt Bomb,

ಮುಂತಾದುವನ್ನು ಒಬ್ಬರು ಇನ್ನೊಬ್ಬರಮೇಲೆ ಸುರಿದು ಎಲ್ಲ ನಾಶವಾಗಿ ಹೋದಾಗ ಸಮುದ್ರದ ಮಧ್ಯದಲ್ಲಿ ಇರುವ ಯಾವುದೋ ಒಂದು ದ್ವೀಪದಲ್ಲಿ ಅನಾಗರೀಕ ಜನಾಂಗವೊಂದು ಬದುಕಿದ್ದು ಅದು ಕ್ರಮೇಣ ವಿಸ್ತರಿಸಿ ಪುನಃ ನಾಗರೀಕತೆಯನ್ನು ಹರಡುವಂತೆ ಎಂದು ಬೇಕಾದರೆ ಊಹಿಸಬಹುದು.

ಬದರಿಯಿಂದ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಬ್ರಹ್ಮಕಪಾಲ ವಿದೆ. ಅಲ್ಲಿ ಅನೇಕರು ತಮ್ಮ ಪಿತೃಗಳಿಗೆ ತರ್ಪಣವನ್ನು ಕೊಡುವರು. ಇಲ್ಲಿ ಗಂಡಸರು ಹೆಂಗಸರು ಯಾರು ಬೇಕಾದರೂ ಕೊಡಬಹುದು. ಇಲ್ಲಿ ಒಂದು ಸಲಿ ಕೊಟ್ಟರೆ ಅವರು ತಮ್ಮ ಗತಿಸಿದ ಪಿತೃಗಳಿಗೆ ಪ್ರತಿವರ್ಷವೂ ಶ್ರಾದ್ಧಾದಿ ಗಳನ್ನು ಮಾಡಬೇಕಾಗಿಲ್ಲ ಎನ್ನುವರು. ನಮ್ಮ ಜೊತೆಯಲ್ಲಿ ಬಂದ ಕೆಲವರು ಈ ಕಾರ್ಯಕ್ಕೆ ಹೋದರು. ಈ ದಿನ ಕೆಲವರು, ಪಿತೃಗಳು ಸತ್ತು ಎಷ್ಟೋ ವರ್ಷಗಳಾಗಿರುತ್ತವೆ, ಅವರು ಯಾವ ಜನ್ಮದಲ್ಲಿ ಎಲ್ಲಿರುತ್ತಾರೆಯೋ, ಅವರಿಗೆ ನಾವಿಲ್ಲಿ ಮಾಡುವ ಕರ್ಮದಿಂದ ಪ್ರಯೋಜನವೇನು ಎನ್ನಬಹುದು. ಶ್ರಾದ್ಧಾದಿ ಗಳ ಮುಖ್ಯ ಗುರಿಯೆಲ್ಲ ಗತಿಸಿದ ಪಿತೃಗಳಿಗೆ ಮತ್ತು ಇತರ ನೆಂಟರಿಗೆ ದೇವರು ಒಳ್ಳೆಯದು ಮಾಡಲಿ ಎಂದು ಕಳುಹಿಸುವ ಪ್ರಾರ್ಥನೆ. ಹುಡಿಮಣ್ಣಿನಲ್ಲಿ ಅಷ್ಟೊಂದು ಶಕ್ತಿ ಸುಪ್ತವಾಗಿರುವುದನ್ನು ನಾವೀಗ ನೋಡುತ್ತಿರುವೆವು. ಆದರೆ ಮನಸ್ಸಿನಿಂದ ಮಾಡುವ ಪ್ರಾರ್ಥನೆಯಲ್ಲಿ ಇದಕ್ಕೆ ಮೀರಿದ ಶಕ್ತಿ ಹುದುಗಿದೆ. ಪ್ರಾರ್ಥನಾಬಲ ಎಲ್ಲಾ ಲೋಕಗಳಿಗೂ ಹೋಗಬಲ್ಲುದು, ಎಲ್ಲಾ ದೇಶಕ್ಕೂ ಹೋಗಬಲ್ಲುದು. ನಾವು ಯಾರಿಗಾಗಿ ಪ್ರಾರ್ಥಿಸುವೆವೋ ಆ ಜೀವಿ ಯಾವು ದಾದರೂ ದೇಶದಲ್ಲಿರಲಿ, ಪ್ರಪಂಚದ ಯಾವ ಮೂಲೆಯಲ್ಲಾದರೂ ಇರಲಿ, ಅವನ ಸದ್ಗತಿಗೆ ಒಂದು ಶಕ್ತಿಯಾಗಿ ನಿಲ್ಲಬಲ್ಲುದು. ಬ್ರಹ್ಮಕಪಾಲ ಒಂದು ಪವಿತ್ರಸ್ಥಳ ಎಂದು ಸಾರುವರು. ಹಿಂದೆ ಶಿವ ಬ್ರಹ್ಮನ ಒಂದು ಕಪಾಲವನ್ನು ತೆಗೆದಾಗ ಆ ಕಪಾಲ ಅವನ ಕೈಗೆ ಅಂಟಿಕೊಳ್ಳುವುದು. ಏನು ಮಾಡಿದರೂ ಬೀಳಲಿಲ್ಲ. ಆಗ ವಿಷ್ಣುವನ್ನು ಪ್ರಾಯಶ್ಚಿತ್ತವೇನು ಎಂದು ಕೇಳಿದಾಗ, ನೀನು ಬದರಿಕಾಶ್ರಮಕ್ಕೆ ಹೋದರೆ ಬ್ರಹ್ಮಹತ್ಯಾದೋಷದಿಂದ ಪಾರಾಗುವೆ ಎಂದನಂತೆ. ಅದರಂತೆ ಶಿವ ಇಲ್ಲಿಗೆ ಬಂದಾಗ ಕೈಗೆ ಅಂಟಿಕೊಂಡಿದ್ದ ತಲೆ ತಾನಾಗಿ ಬಿದ್ದು ಹೋಗುವುದು. ನಮ್ಮ ಪುರಾಣಗಳು ತ್ರಿಮೂರ್ತಿಗಳೇ ಆಗಲಿ ಯಾರಾದರೂ

ಒಂದು ತಪ್ಪು ಮಾಡಿದರೂ ಪ್ರಾಯಶ್ಚಿತ್ತ ಮಾಡಿಕೊಳ್ಳದೆ ವಿಧಿಯಿಲ್ಲ. ಈ ಕರ್ಮ ಸಿದ್ಧಾಂತಕ್ಕೆ ವಿನಾಯಿತಿ ಎಂಬುದಿಲ್ಲ. ನರನನ್ನು ಕಾಣುವಂತೆಯೇ ದೇವರನ್ನೂ ಕಾಡುವಂತೆಯೇ ದೇವರನ್ನೂ ಕಾಡುವುದು. ಯಾರು ಈ ಕರ್ಮ ಸಿದ್ಧಾಂತವನ್ನು ಜಾರಿಗೆ ತಂದರೋ ಅವರನ್ನು ಕೂಡ ಬಿಡುವುದಿಲ್ಲ.

ಇಲ್ಲಿಂದ ಸ್ವಲ್ಪ ಮುಂದೆ ಹೋದರೆ ವ್ಯಾಸಗುಹೆ, ಗಣೇಶಗುಹೆಗಳು ಸಿಗುತ್ತವೆ. ಈ ಗುಹೆಗಳಲ್ಲಿ ಅವರಿಬ್ಬರೂ ಹಿಂದೆ ವಾಸಮಾಡುತ್ತಿದ್ದರೆಂದು ಹೇಳುವರು. ವ್ಯಾಸರು ಅಷ್ಟಾದಶಪುರಾಣಗಳನ್ನು ಬರೆದ ಸ್ಥಳ, ಭಾರತವನ್ನು ಬರೆದ ಸ್ಥಳ. ಈ ಬೃಹತ್ ಕಾರ್ಯಕ್ಕೆ ಗಣೇಶ ಸಹಾಯಕ್ಕೆ ಬರದೆ ಇದ್ದರೆ ಅವರಿಗೆ ಸಾಗುತ್ತಿರಲಿಲ್ಲವೆಂದು ಕಾಣುವುದು. ವ್ಯಾಸರು ಬಾಯಲ್ಲಿ ಹೇಳುವರು. ಗಣೇಶವಿದ್ಯುದ್ವೇಗದಲ್ಲಿ ಅದನ್ನು ಬರೆದಿಡುವನು, ಆ ವೇಗ ಹೇಳುವವರಿಗೆ ಮತ್ತು ಬರೆಯುವವರಿಗೆ ಇಲ್ಲದಿದ್ದರೆ ಇಷ್ಟೊಂದು ಪುರಾಣಗಳನ್ನು ಒಂದು ಜನ್ಮದಲ್ಲಿ ಬರೆಯಲು ಸಾಧ್ಯವಿಲ್ಲ.

ಇಲ್ಲಿಂದ ಸ್ವಲ್ಪ ದೂರದಲ್ಲಿ ಪಾಂಡವರು ಸ್ವರ್ಗಾರೋಹಣ ಮಾಡಿದ ಸ್ಥಳ ಇದೆ. ಪಾಂಡವರು ದ್ರೌಪದಿ ಸಹಿತ ಸ್ವರ್ಗಕ್ಕೆ ಏರಿಹೋದಾಗ ಒಬ್ಬೊಬ್ಬರಾಗಿ ಸತ್ತುಹೋಗಿ ಕೊನೆಗೆ ಧರ್ಮರಾಯ ಮತ್ತು ಅವನೊಡನೆ ಒಂದು ನಾಯಿ ಉಳಿದುಕೊಳ್ಳುವುದು. ದೇವೇಂದ್ರ ವಿಮಾನದಲ್ಲಿ ಧರ್ಮರಾಯನನ್ನು ಕರೆದುಕೊಂಡು ಹೋಗಲು ಬಂದನು. ಆದರೆ ಧರ್ಮರಾಯ ತಾನು ಸಹೋದರರಿಲ್ಲದೆ ಬರುವುದಿಲ್ಲ ಎಂದಾಗ ದೇವೇಂದ್ರ ಅವರಾಗಲೇ ಸ್ವರ್ಗದಲ್ಲಿರುವವರು ಎಂದನು. ಹಾಗಾದರೆ ತಾನು ಬರುತ್ತೇನೆ ಎಂದು ತನ್ನೊಡನೆ ಬಂದ ನಾಯಿಗೆ ವಿಮಾನ ಏರು ಎನ್ನುವನು. ದೇವೇಂದ್ರ ಆಶ್ಚರ್ಯಚಕಿತನಾಗಿ ಮನುಷ್ಯ ನಾಯೊಂದಿಗೆ ಸ್ವರ್ಗಕ್ಕೆ ಏರಲಾರ ಎಂದನು. ಹಾಗಾದರೆ ತಾನೂ ಬರುವುದಿಲ್ಲ ಎಂದು ಹಟ ತೊಟ್ಟನು. "ನೀನು ತುಂಬಾ ಧರ್ಮಾತ್ಮನಾಗಿದ್ದುದರಿಂದ ನೀನು ಅಥವಾ ನಾಯಿ ಇಬ್ಬರಲ್ಲಿ ಯಾರನ್ನಾದರೂ ಒಬ್ಬರನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತೇನೆ. ಯಾರು ಬರುತ್ತೀರಿ ಹೇಳಿ" ಎಂದನು. ಧರ್ಮರಾಯ ತನ್ನನ್ನೇ ಹಿಂಬಾಲಿಸುತ್ತಿದ್ದ ನಾಯಿಯನ್ನೇ ಕರೆದುಕೊಂಡು ಹೋಗು ಎಂದನು. ತಕ್ಷಣ ದೃಶ್ಯ ಬದಲಾಯಿಸುವುದು. ನಾಯಿ ಧರ್ಮನ ರೂಪವನ್ನು ತಾಳುವುದು.

ಅನಂತರ ಎಲ್ಲರೂ ಸ್ವರ್ಗಕ್ಕೆ ಹೋಗುವರು. ಧರ್ಮರಾಯನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋದದ್ದು ಧರ್ಮ. ಸಾಹಸ ಧೈರ್ಯ ಪರಾಕ್ರಮಕ್ಕೆ ಪ್ರಖ್ಯಾತ ರಾದವರೆಲ್ಲಾ ಹಿಂದೆ ಬೀಳುವರು. ಇಹದಲ್ಲಿ ನಮ್ಮನ್ನು ಕಾಯುವುದು, ಪರಲೋಕಕ್ಕೆ ಪ್ರಯಾಣ ಮಾಡುವಾಗ ನಮಗೆ ದಾರಿಯಲ್ಲಿ ಬರುವ ಬುತ್ತಿ, ಧರ್ಮ ಒಂದೇ ಎಂಬುದನ್ನು ಮಹಾಭಾರತದ ನಾಟಕದ ಕೊನೆಯ ಅಂಕ ಸಾರಿ ಹೇಳುವುದು. ಆ ದೃಶ್ಯ ನಡೆದ ಸ್ಥಳವೇ ಇಲ್ಲಿದೆ.

ಬದರೀನಾಥ ದೇವಸ್ಥಾನ ಈಗ ಯಾವ ಸ್ಥಿತಿಯಲ್ಲಿರುವುದೋ ಹಾಗೆಯೇ ಹಿಂದಿನಿಂದಲೂ ಇರಲಿಲ್ಲ. ಈಗ ದೇವಸ್ಥಾನವನ್ನು ನೋಡಿದರೆ ಅದು ಕೇವಲ ಇಪ್ಪತ್ತು ಇಪ್ಪತ್ತೈದು ವರ್ಷಗಳ ಕೆಳಗೆ ಕಟ್ಟಿದಂತೆ ಕಾಣುವುದು. ಅದರ ಒಳಗಡೆ ಕೆಲವು ಭಾಗಗಳನ್ನು ಎರಡುಮೂರು ವರ್ಷಗಳ ಹಿಂದೆ ಕಟ್ಟಿದಂತೆ ತೋರುವುದು. ಭಾಗವತದಲ್ಲಿ ಕೂಡ ಶ್ರೀಕೃಷ್ಣ ಉದ್ಧವನಿಗೆ ಬದರಿಕಾಶ್ರಮಕ್ಕೆ ತಪಸ್ಸು ಮಾಡಲು ಹೋಗು ಎಂದು ಹೇಳುವನು. ಆಗಿನ ಕಾಲದಲ್ಲೇ ಬದರಿ ಪುಣ್ಯಕ್ಷೇತ್ರವೆಂದು ಪ್ರಖ್ಯಾತವಾಗಿತ್ತು. ಅನಂತರ ನಮಗೆ ಸ್ಥಳಪುರಾಣದಿಂದ ಸಿಕ್ಕುವ ಆಧಾರದಲ್ಲಿ ಶಂಕರಾಚಾರ್ಯರು ಸುಮಾರು ಎಂಟನೇ ಶತಮಾನದಲ್ಲಿ ಇಲ್ಲಿಗೆ ಬಂದಿದ್ದರೆಂದೂ, ಅಳಕನಂದಾ ನದಿಯೊಳಗೆ ನಾರದಕ್ಷೇತ್ರದಲ್ಲಿ ಈಗ ಇರುವ ವಿಗ್ರಹವಿದೆ ಎಂದು ಕನಸಾಯಿತೆಂದು ಹೇಳುವರು. ಅನಂತರ ಅವರು ಆ ವಿಗ್ರಹವನ್ನು ತಪ್ತಕುಂಡದ ಹತ್ತಿರ ಪ್ರತಿಷ್ಠೆಮಾಡಿ ತಮ್ಮ ಕಡೆಯವರೊಬ್ಬ ರಿಗೆ ಪೂಜೆಮಾಡುವಂತೆ ನೇಮಿಸಿ ಹೋದರು. ಈಗಲೂ ಕೂಡ ಬದರಿಯಲ್ಲಿ ಮಲಬಾರಿನ ನಂಬೂದ್ರಿ ಬ್ರಾಹ್ಮಣರು ಪೂಜೆ ಮಾಡುವರು. ಕೆಲವು ಕಾಲದ ಮೇಲೆ ಟಿಹರಿ ರಾಜ ಈಗ ಇರುವ ಸ್ಥಳದಲ್ಲಿ ದೇವಸ್ಥಾನವನ್ನು ಕಟ್ಟಿದನು ಎಂದು ಹೇಳುವರು. ಇಲ್ಲಿಗೆ ಶ್ರೀ ರಾಮಾನುಜಾಚಾರ್ಯರು, ಮಧ್ವಾಚಾರ್ಯರು ಬಂದಿದ್ದರಂತೆ. ತ್ರಿಮತಸ್ಥಾಪನಾಚಾರ್ಯರ ಪಾದಧೂಳಿಯಿಂದ ಪವಿತ್ರವಾದ ಸ್ಥಳ ಇದು. ಬೌದ್ಧರು ಕೂಡ ಈಗ ಇಲ್ಲಿಯ ದೇವಸ್ಥಾನಕ್ಕೆ ಬರುವರು. ಅವರು ಈ ಮೂರ್ತಿಯನ್ನು ಧ್ಯಾನಮಗ್ನ ಬುದ್ಧನೆಂದು ನೋಡುವರು. ಹಿಂದೂ ಗಳು ಅದನ್ನು ಯೋಗಸ್ಥವಿಷ್ಣು ಎನ್ನುವರು. ಯಾರು ಯಾವ ದೃಷ್ಟಿಯಿಂದ ಬೇಕಾದರೂ ಇದನ್ನು ನೋಡಬಹುದು.

ಸಂಜೆ ನಾವು ದೇವಸ್ಥಾನಕ್ಕೆ ಹೋದಾಗ ವಿದ್ಯುದ್ದೀಪಗಳಿಂದ ಅದು ಅಲಂಕೃತವಾಗಿತ್ತು. ದೇವಸ್ಥಾನದ ಒಳ ಅಂಗಳದಲ್ಲಿ ಒಂದುಕಡೆ ತಾಳಮೇಳ ಗಳಿಂದ ಭಜನೆ ಮಾಡುತ್ತಿದ್ದರು. ಲಕ್ಷ್ಮಿಯ ದೇವಸ್ಥಾನದಲ್ಲಿ ಸುಮಾರು ಏಳುಜನ ಕುಳಿತುಕೊಂಡು ಸಪ್ತಶತೀಪಾರಾಯಣ ಮಾಡುತ್ತಿದ್ದರು. ದೇವಸ್ಥಾನದ ಸುತ್ತಲೂ ಜನ ಭಕ್ತಿಯಿಂದ ಪ್ರದಕ್ಷಿಣೆ ಬರುತ್ತಿದ್ದರು. ಕೆಲವರು ಜಪ ಮಾಲೆ ಹಿಡಿದು ಜಪ ಮಾಡುತ್ತ ಅದರಲ್ಲೇ ತಲ್ಲೀನರಾಗಿ ಹೋಗುತ್ತಿದ್ದರು. ಕೆಲವರು ಗದ್ಗದಕಂಠದಿಂದ ಭಗವಂತನ ಹೆಸರನ್ನು ಹೇಳುತ್ತ ಹೋಗುತ್ತಿದ್ದರು. ಗರ್ಭಗುಡಿಯ ಒಳಗೆ ನಿಂತೊಡನೆಯೆ ಯಾತ್ರಿಕರ ಭಕ್ತಿಯ ತೂಬು ತೆರೆಯುವುದು. ಎಲ್ಲರೂ ತಮ್ಮ ತಮ್ಮ ಹೃದಯದ ಭಾಷೆಯಲ್ಲಿ ಭಗವಂತ ಇವರು ಹೇಳುತ್ತಿರುವುದನ್ನೆಲ್ಲ ಕೇಳುತ್ತಿರುವನೋ ಎಂಬಂತೆ ಮಾತನಾಡುವರು, ಕಂಬನಿ ಕರೆಯುವರು, ನಮಸ್ಕರಿಸುವರು. ಈ ದೃಶ್ಯ ಪೂಜಾರಿ ಹೇಳುವ ಮಂತ್ರಕ್ಕಿಂತ ಹೆಚ್ಚು ನನ್ನ ಎದೆಗೆ ತಟ್ಟಿತು. ಇವೆಲ್ಲ ಬೆಂದಹೃದಯದಿಂದ ಹಿಂಡಿಬಂದ ಭಾಷೆ. ಯಾವ ಕೃತಕತೆಯೂ ಇಲ್ಲ. ಇಲ್ಲಿಗೆ ಬರಬೇಕು, ಭಗವಂತನನ್ನು ನೋಡಬೇಕು ಎಂದು ಎಷ್ಟು ವರ್ಷಗಳಿಂದ ಹರಕೆ ಕಟ್ಟಿಕೊಂಡಿದ್ದರೊ. ಅದು ಈಗ ನೆರವೇರಿತೆಂದು ಆನಂದಾಶ್ರು ಕೆಲವರ ಕಣ್ಣಿನಲ್ಲಿ. ಇದನ್ನೆಲ್ಲ ನೋಡುತ್ತ ಆ ಸ್ಥಳದಲ್ಲಿ ನಿಂತರೆ ನಾವು ಬೇರೊಂದು ಲೋಕಕ್ಕೇ ಹೋಗುವೆವು. ಆ ಸ್ಥಳ ಭಕ್ತಿವಾತಾವರಣದಿಂದ ಅನುರಣಿತವಾಗುತ್ತಿದೆ. ಎಷ್ಟು ಶತಮಾನಗಳಿಂದ ಯಾತ್ರಿಕರು ಈ ಸ್ಥಳಕ್ಕೆ ಬಂದು ಭಕ್ತಿಯಿಂದ ಬಾಗಿ ತಮ್ಮ ಹೃದಯದ ಬೇಗೆಯನ್ನು ಇಲ್ಲಿ ತೋಡಿಕೊಂಡು ಹಗುರವಾಗಿ ಹೋಗುತ್ತಿರುವರೋ! ದೂರದಲ್ಲಿ ಮೂಲೆಯೊಂದರಲ್ಲಿ ನಿಂತ ಯಾತ್ರಿಕನೊಬ್ಬ ಊರಿನಿಂದ ತಂದ ಚಾಮರದಲ್ಲಿ ದೇವರಿಗೆ ಗಾಳಿ ಹಾಕುತ್ತಿದ್ದನು. ಪೂಜಾರಿಗಳಲ್ಲಿ ಕೆಲವರು ವಿಷ್ಣುಸಹಸ್ರನಾಮ ಹೇಳುತ್ತಿದ್ದರು. ಕೆಲವರು ಮುಕುಂದಮಾಲೆ ಹೇಳುತ್ತಿದ್ದರು. ಕೇಳುವುದಕ್ಕೆ ಕಿವಿಗೆ ಇಂಪಾಗಿತ್ತು. ಎಂತಹ ಪರಾಭಕ್ತಿ ಆ ಕುಲಶೇಖರ ಆಳ್ವಾರರು ರಚಿಸಿದ ಮುಕುಂದಮಾಲೆಯ ಶ್ಲೋಕದಲ್ಲಿ ತುಂಬಿ ತುಳುಕಾಡುತ್ತಿದೆ.

ನಾಹಂ ವಂದೇ ತವ ಚರಣಯೋರ್ದ್ವಂದ್ವಮದ್ವಂದಹೇತೋಃ
ಕುಂಭೀಪಾಕಂ ಗುರುಮಪಿ ಹರೇ ನಾರಕಂ ನಾಪನೇತುಂ |

ರಮ್ಯಾ ರಾಮಾ ಮೃದುತನುಲತಾನಂದನೇ ನಾಪಿ ರಂತುಂ
ಭಾವೇ ಭಾವೇ ಹೃದಯಭವನೇ ಭಾವಯೇಯಂ ಭವಂತಂ ||

ನಾಸ್ಥಾ ಧರ್ಮೇ ನ ವಸುನಿಚಯೇ ನೈವ ಕಾಮೋಪಭೋಗೇ
ಯದ್ಯದ್ಭವ್ಯಂ ಭವತು ಭಗವನ್ ಪೂರ್ವಕರ್ಮಾನುರೂಪಂ |
ಏತತ್ಪ್ರಾರ್ಥ್ಯಂ ಮಮ ಬಹುಮತಂ ಜನ್ಮಜನ್ಮಾಂತರೇಪಿ
ತ್ವತ್ಪಾದಾಂಬೋರುಹಯುಗಗತಾ ನಿಶ್ಚಲಾ ಭಕ್ತಿರಸ್ತು ||

ದಿವಿ ವಾ ಭುವಿ ವಾ ಮಮಾಸ್ತು ವಾಸೋ
ನರಕೇ ವಾ ನರಕಾಂತಕ ಪ್ರಕಾಮಮ್ |
ಅವಧೀರಿತಶಾರದಾರವಿಂದೌ
ಚರಣೌ ತೇ ಮರಣೇಽಪಿ ಚಿಂತಯಾಮಿ ||

"ಶ್ರೀಹರಿ, ನಾನು ನಿನ್ನ ಚರಣಾರವಿಂದವನ್ನು ಸುಖದುಃಖಗಳ ಗೊಂದಲದ ಬಿಡುಗಡೆಗಾಗಿ ವಂದಿಸುವುದಿಲ್ಲ. ಗುರುತರವಾದ ಕುಂಭೀಪಾಕ ನರಕ ದುಃಖವನ್ನು ನಿವಾರಿಸೆಂದು ಪ್ರಾರ್ಥಿಸುವುದಿಲ್ಲ. ನಂದವನದಲ್ಲಿ ತರುಣಿಯರ ಕೋಮಲ ಲತೆಯನ್ನು ಕೂಡಿ ವಿಹರಿಸುವುದಕ್ಕಾಗಿ ನಿನ್ನನ್ನು ನಮಿಸುವುದಿಲ್ಲ. ಆದರೆ ಜನ್ಮಜನ್ಮಗಳಲ್ಲಿ ಪ್ರತಿಯೊಂದು ಭಾವದಲ್ಲಿಯೂ ನನ್ನ ಹೃದಯಭವನದಲ್ಲಿ ನಿನ್ನನ್ನು ಧ್ಯಾನಿಸಲು ಬಯಸುವೆನು.

"ಭಗವಾನ್, ನನಗೆ ಧರ್ಮದಲ್ಲಿ ಆಸೆಯಿಲ್ಲ, ದ್ರವ್ಯದಮೇಲೆ ಬಯಕೆಇಲ್ಲ, ಕಾಮೋಪಭೋಗದಲ್ಲಿಯೂ ಇಚ್ಛೆಯಿಲ್ಲ. ಪೂರ್ವಕರ್ಮಾನುಸಾರ ಯಾವು ಯಾವುದು ಹೇಗೆ ಹೇಗೆ ಆಗಬೇಕೋ ಹಾಗೆ ನಡೆಯಲಿ. ಆದರೆ ನಾನು ವಿಶೇಷ ಪ್ರೀತಿಯಿಂದ ಪ್ರಾರ್ಥಿಸುವುದು ಇದೊಂದು. ನನಗೆ ಜನ್ಮ ಜನ್ಮಾಂತರಗಳಲ್ಲಿ ನಿನ್ನ ಚರಣಾರವಿಂದದ್ವಯದಮೇಲೆ ಭಕ್ತಿಯುಂಟಾಗಲಿ.

"ಎಲೈ ನರಕಾಂತಕನೆ, ನಾನು ಸ್ವರ್ಗದಲ್ಲಿಯೋ ಭೂಮಿಯಲ್ಲಿಯೋ ಎಲ್ಲಿಬೇಕಾದರೂ ವಾಸಮಾಡಬಹುದು. ನರಕವಾದರೂ ಚಿಂತೆಯಿಲ್ಲ ಶರತ್ಕಾಲದ

ಚಂದ್ರನನ್ನು ಅಲ್ಲಗಳೆಯುವಷ್ಟು ಸುಂದರವಾದ ನಿನ್ನ ದಿವ್ಯ ಚರಣಕಮಲಗಳನ್ನು ಮಾತ್ರ ಚಿಂತಿಸುವ ಪುಣ್ಯವಿರಲಿ."

ಕುಲಶೇಖರ ಆಳ್ವಾರರ ಭಕ್ತಿ ಅಲರನ್ನೇ ಭಗವಂತನ ಅಡಿದಾವರೆಗೆ ಅರ್ಪಿಸಿದೆ. ಅವರು ಏನನ್ನು ಬೇಡಿದರೋ ಅದನ್ನೇ ನನಗೂ ಅನುಗ್ರಹಿಸು ಎಂದು ಬೇಡಿದೆ.

ಅನಂತರ ಲಕ್ಷ್ಮಿಯ ದೇವಸ್ಥಾನಕ್ಕೆ ಬಂದೆವು. ಸಪ್ತಶತಿಯಲ್ಲಿ ಕೊನೆಕೊನೆಗೆ ಬರುವ ಪ್ರಾರ್ಥನೆಯನ್ನು ಆ ಮ ಹಾ ತಾ ಯಿ ಎಡೆಯಲ್ಲಿ ಸಮರ್ಪಿಸಿದೆ:

ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।
ಶರಣ್ಯೇ ತ್ರ್ಯಂಬಕೇ ಗೌರೀ ನಾರಾಯಣಿ ನಮೋಸ್ತುತೇ ॥
ಸೃಷ್ಟಿಸ್ಥಿತಿವಿನಾಶಾನಾಂ ಶಕ್ತಿಭೂತೇ ಸನಾತನಿ ।
ಗುಣಾಶ್ರಯೇ ಗುಣಮಯೇ ನಾರಾಯಣಿ ನಮೋಸ್ತುತೇ ।
ಶರಣಾಗತದೀನಾರ್ತಪರಿತ್ರಾಣ ಪಾರಾಯಣೆ
ಸರ್ವಸ್ಯಾರ್ತಿಹರೇ ದೇವಿ ನಾರಾಯಣಿ ನಮೋಸ್ತುತೇ ॥

"ಸರ್ವಮಂಗಳಮಯಿ, ಶ್ರೇಯಸ್ಕರಿ, ನಮ್ಮ ಬಯಕೆಗಳನ್ನೆಲ್ಲ ಈಡೇರಿಸುವವಳು ನೀನು. ನಿನ್ನಲ್ಲಿ ಶರಣುಹೊಂದಲು ಅವಕಾಶಕೊಡುವ ಜ್ಞಾನಕಣ್ಣುಗಳಿವೆ ನಿನಗೆ. ಸುಂದರ ತನು ನಿನ್ನದು. ದೇವಿ ನಿನಗೆ ನಮಸ್ಕಾರ.

"ಹೇ ಸನಾತನೀ, ಸೃಷ್ಟಿಸ್ಥಿತಿವಿನಾಶವನ್ನು ಉಂಟುಮಾಡುವ ಆದಿಶಕ್ತಿ ನೀನು. ಎಲ್ಲಾ ಸುಗುಣಗಳ ಆಶ್ರಯೆ ನೀನು. ಆದರೂ ನೀನು ಗುಣಗಳನ್ನು ಮೀರಿರುವೆ. ದೇವಿ ನಿನಗೆ ನಮಸ್ಕಾರ.

"ಹೇ ಜನನಿ, ನಿನ್ನಲ್ಲಿ ಶರಣುಹೊಂದಲು ಬರುವ ದೀನರು ಮತ್ತು ದುಃಖಿಗಳನ್ನು ಅನವರತವೂ ನೀನು ರಕ್ಷಿಸುವೆ. ಎಲ್ಲರ ದುಃಖವನ್ನು ಪರಿಹರಿಸುವೆ. ದೇವಿ ನಿನಗೆ ನಮಸ್ಕಾರ."

'ಸಾಕ್ಷಾತ್ ನಾರದರ ಕ್ಷೇತ್ರ ಇದು. ಆ ಮಹರ್ಷಿಗಳು ರಚಿಸಿದ ಭಕ್ತಿಸೂತ್ರದ ಪರಾಭಕ್ತಿಯ ಕೆಲವು ಸೂತ್ರಗಳು ಮನಸ್ಸಿಗೆ ಬಂದವು.

“ ಪರಾಭಕ್ತಿ ಪ್ರೇಮಸ್ವರೂಪವಾದುದು. ಅದು ಲಭಿಸಿದರೆ ಮಾನವ ಸಿದ್ಧನಾಗುತ್ತಾನೆ, ಅಮೃತನಾಗುತ್ತಾನೆ, ತೃಪ್ತನಾಗುತ್ತಾನೆ. ಅದು ಲಭಿಸಿದರೆ ಮತ್ತಾವುದೂ ಬೇಕಾಗುವುದಿಲ್ಲ. ದ್ವೇಷಪಡುವುದಿಲ್ಲ. ಅದನ್ನು ಪಡೆದರೆ ಮುಕ್ತನಾಗುತ್ತಾನೆ, ಸ್ತಬ್ಧನಾಗುತ್ತಾನೆ, ಆತ್ಮಾರಾಮನಾಗುತ್ತಾನೆ.” ಹೇ ದೇವರ್ಷಿ, ಇಂತಹ ಭಕ್ತಿಯನ್ನು ದಯಪಾಲಿಸೆಂದು ಬೇಡಿದೆ.

ಹೊರಗೆ ಬರುವಾಗ ರಾತ್ರಿ ಒಂಭತ್ತುಗಂಟೆಯ ಸಮಯ. ತಾರಾ ಖಚಿತ ಅಂಬರ ಸಹಸ್ರಾಕ್ಷಿಯಂತೆ ಕೆಳಗೆ ನೋಡುತ್ತಿತ್ತು. ಹರಿವ ಅಳಕನಂದಾ ಧ್ವನಿಯ ಮೊರೆ ಅನಾಹುತ ಧ್ವನಿಯಂತೆ ಇತ್ತು. ಭುವಿ ಬಾನ್‌ಗಿರಿಗಳೆಲ್ಲ ವಾಸುದೇವ ಮಯವಾಯಿತು. ಚರಾಚರ ಜಗತ್ತೆಲ್ಲ ಅವನಲ್ಲಿ ಓತಪ್ರೋತವಾದಂತೆ ಭಾಸವಾಯಿತು. ಒಳಗೆ ಹೊರಗೆ ಅವನಲ್ಲದನ್ಯ ವಸ್ತುವೇ ಇಲ್ಲ.

ಇದೊಂದು ಜೀವನದಲ್ಲಿ ಚಿರಸ್ಮರಣೀಯ ದಿನ. ಮಧ್ಯೆ ಮಧ್ಯೆ ಮನನ ಮಾಡುವ ದಿನ. ನೆನಹಿನ ಭಂಡಾರದ ಒಂದು ಅನರ್ಘ್ಯ ರತ್ನದಂತೆ ಇರುವ ದಿನ.

# ಪರಿಶಿಷ್ಟ

## ೧. ಹರಿದ್ವಾರದಿಂದ ಕೇದಾರನಾಥಕ್ಕೆ ಪ್ರಯಾಣದ ವಿವರ

| ಎತ್ತರ | ಊರು | ಪೋ. ಆಫೀಸು | ದೂರ | ಒಟ್ಟುದೂರ |
|---|---|---|---|---|
| | ಹರಿದ್ವಾರ (ಬಸ್ಸಿನಲ್ಲಿ) | ಪೋ.ಟಿ.ಆ. | — | |
| ೧೧೧೬ | ಹೃಷೀಕೇಶ | ,, | ೧೫ | ೧೫ |
| ೧೫೫೦ | ದೇವಪ್ರಯಾಗ | ,, | ೪೨ | ೫೭ |
| | ಕೀರ್ತಿನಗರ | ಪೋ. ಆ. | ೨೧ | ೭೮ |
| | ಶ್ರೀನಗರ | ಪೋ.ಟಿ.ಆ. | ೩ | ೮೧ |
| ೨೦೦೦ | ರುದ್ರಪ್ರಯಾಗ(ಕಾಲುನಡಿಗೆ) | ಪೋ.ಟಿ.ಆ. | ೨೨ | ೭೮ |
| | ಚಟೋಲಿ | — | ೫ | ೧೦೮ |
| | ಮತ್ | — | ೧ | ೧೦೯ |
| | ರಾಮಪುರ | — | ೧ | ೧೧೦ |
| ೨೩೦೦ | ಸೋರ್‌ಗರ್ | — | ೨ | ೧೧೨ |
| ೩೦೦೦ | ಅಗಸ್ತ್ಯಮುನಿ | ಪೋ.ಟಿ.ಆ. | ೨॥ | ೦೧೪॥ |
| | ಶೌರಿ | — | ೨ | ೧೧೬॥ |
| | ಚಂದ್ರಪುರಿ | ಪೋ.ಆ. | ೨ | ೧೧೮॥ |
| | ಭಿರಿ | — | ೨॥ | ೧೨೧ |
| ೩೦೦೦ | ಬತ್‌ವಾಲ್‌ಚಾರಿ | — | ೨॥ | ೧೨೩॥ |
| | ಕುಂದ್ | — | ೧ | ೧೨೪॥ |
| ೪೮೫೦ | ಗುಪ್ತಕಾಶಿ | ಪೋ.ಟಿ.ಆ. | ೨॥ | ೧೨೭ |
| | ನಾಲಚಿಟ್ಟ | — | ೧॥ | ೧೨೮॥ |
| | ನಾರಾಯಣಕೋಟಿ | — | ೨ | ೧೩೦॥ |
| | ಬ್ಯೊಂಗ್‌ಮಲ್ಲ | — | ೧॥ | ೧೩೨ |
| | ವೈಕುಂಡ | — | ೨ | ೧೩೪ |
| ೫೨೫೦ | ಘಾಟ | ಪೋ.ಆ. | ೨ | ೧೩೬ |
| | ರಾಮಪುರ | — | ೩ | ೧೩೯ |

| | | | | |
|---|---|---|---|---|
| ೬೫೦೦ | ಗೌರಿಕುಂಡ | ಪೋ.ಆ. | ೬ | ೧೪೯ |
| | ರಂಭಾರ | — | ೪ | ೧೪೯ |
| ೧೧೭೭೩ | ಕೇದಾರನಾಥ | — | ೩ | ೧೫೨ |

## ೨. ಕೇದಾರನಾಥದಿಂದ ಬದರೀನಾರಾಯಣಕ್ಕೆ

| | | | | |
|---|---|---|---|---|
| ೧೧೭೫೩ | ಕೇದಾರನಾಥ | | | |
| | ನಾಲ | | ೨೩ | ೨೩ |
| ೪೩೦೦ | ಉಖೀಮಠ | ಪೋ.ಟಿ.ಆ. | ೩ | ೨೬ |
| | ಗಣೇಶಚಟ್ಟಿ | — | ೩॥ | ೨೯॥ |
| | ಪೋತಿಭಾಸ | — | ೫ | ೩೪॥ |
| ೭೭೦೦ | ದೋಗಲ್‌ಭೀಟ | — | ॥ | ೩೫ |
| | ಬನಿಯಕುಂಡ | — | ೧॥ | ೩೬॥ |
| | ಚೋಪ್ಟ | — | ೧ | ೩೭॥ |
| ೧೨೦೭೩ | ತುಂಗನಾಥ | — | ೩ | ೪೦॥ |
| | ಜಂಗಲ್‌ಚಟ್ಟಿ | — | ೩ | ೪೩॥ |
| | ಪಂಗಲ್‌ಭಾಸ | — | ೨॥ | ೪೬ |
| | ಮಂಡಲ್‌ಚಟ್ಟಿ | | ೪ | ೫೦ |
| | ಗೋಪೇಶ್ವರ | ಪೋ.ಆ. | ೪॥ | ೫೪॥ |
| ೩೧೫೦ | ಚಮೋಲಿ | ಪೋ.ಟಿ.ಆ. | ೩ | ೫೭॥ |
| ೪೯೦೦ | ಪೀಪಲ್‌ಕೋಟಿ | ಪೋ.ಟಿ.ಆ. | ೯॥ | ೬೭ |
| | ಗರುಡಗಂಗ | — | ೩॥ | ೭೦॥ |
| | ಟಾಂಗನಿ | — | ೧॥ | ೭೨ |
| | ಪಾತಾಳಗಂಗ | ಪೋ.ಆ. | ೩ | ೭೫ |
| ೫೩೦೦ | ಗುಲಾಬ್‌ಕೋಟಿ | — | ೨ | ೭೭ |
| | ಹೇಲಂಗ್ | ಪೋ.ಆ. | ೨ | ೭೯ |

